# ಸಿದ್ಧಗಂಗಾ

ಸಂಪುಟ-೨೫ ಸಂಚಿಕೆ-೫ ಮೇ, ೧೯೮೯

## ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

ಯಾರು ಇಲ್ಲದವರಿಗೆ ತಾಯಾದೆ ತಂದ್ಯಾದೆ
ಊರೆ ಗೋಲಾದೆ ಬದುಕಿಗೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

* * *

ಬಸವ ಪಥದೆಲ್ಲಿ ನಡೆಸಿ ಹಸಗೈದೆ ಜೀವನವ
ಕಸವಾಗದಂತೆ ಸಲಹಿದೆ ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

* * *

ಶರಣ ಸಾಹಿತ್ಯ ಪರಮ ಪಾವನವೆನುತ
ಹರಕರುಣದ, ಸಿರಿಬೆಳಕತೋರಿದ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

– ಹೆಚ್. ವಿ. ವೀರಭದ್ರಯ್ಯ

## ಒಳ ಪುಟಗಳಲ್ಲಿ



## ಶ್ರೀವಾಣಿ



ಶೈಕ್ಷಣಿಕ ವರ್ಷ ಆರಂಭವಾಗುತ್ತಿದೆ. ಶಾಲಾ ಕಾಲೇಜುಗಳು ಕಾರ್ಯ ಪ್ರವೃತ್ತವಾಗಿವೆ. ಪರೀಕ್ಷೆಗಳು ಬಂದರೆ ವಿದ್ಯಾರ್ಥಿಗಳಿಗೆ ತಲೆ ಬಿಸಿಯಾದರೆ. ಪರೀಕ್ಷೆಯಲ್ಲಿ ಉತ್ತೀರ್ಣರಾದ ಮಕ್ಕಳಿದ್ದರೆ ಪೋಷಕರಿಗೆ ತಲೆಬಿಸಿಯೇರುತ್ತದೆ. ಮುಂದಿನ ತರಗತಿಗೆ ಕಳುಹಿಸಬೇಕು, ಓದಿಸುವ ವಿಷಯ, ಓದುವ ವಿದ್ಯಾಸಂಸ್ಥೆ, ಉತ್ತಮ ಪರಿಸರ, ಅನುಕೂಲ ಸೌಲಭ್ಯಗಳು, ಪ್ರವೇಶಾವಕಾಶ ಪಡೆಯುವ ವಿಧಾನ, ಆರ್ಥಿಕ ಸ್ಥಿತಿಗತಿ ಮುಂತಾದ ಹತ್ತು ಹಲವು ವಿಷಯಗಳ ಬಗ್ಗೆ ಚಿಂತೆಗೊಳಗಾಗಬೇಕಾಗುತ್ತದೆ. ಅಭ್ಯಾಸ ಮುಗಿಸಿ ಪದವಿ ಪಡೆದ ಮಕ್ಕಳಿದ್ದರೆ ಹುದ್ದೆಗಳ ಹುಡುಕಾಟದಲ್ಲಿ ತೊಳಲುವ ಪೋಷಕರ ಕಾತರ ಚುರುಕಾಗುತ್ತದೆ. ಉತ್ತಮ. ಫಲಿತಾಂಶ ಬಂದಿರುವ ವಿದ್ಯಾಸಂಸ್ಥೆಗಳಿಗೆ ಪ್ರವೇಶ ದೊರಕಿಸಿಕೊಳ್ಳಲು ಪೈಪೋಟಿ ಶಿಫಾರಸ್ಸು ಮುಂತಾದ ಮಾರ್ಗೋಪಾಯಗಳ ಹುಡುಕಾಟದ ಹೋರಾಟ. ಹೀಗಾಗಿ ನೂರಾರು ಚಟುವಟಿಕೆಗಳಲ್ಲಿ ಪ್ರತಿವರ್ಷ ಜೂನ್ ಜುಲೈತಿಂಗಳಲ್ಲಿ ಶೈಕ್ಷಣಿಕ ವರ್ಷ ಪ್ರಾರಂಭಗೊಳ್ಳುತ್ತದೆ, ಇಷ್ಟೆಲ್ಲದರ ಪರಿಣಾಮ ಯೋಗ್ಯ ಶಿಕ್ಷಣ ಕೊಡಿಸುವುದು. ಶಿಕ್ಷಣ ಅಥವಾ ವಿದ್ಯಾಭ್ಯಾಸವೆಂದರೆ ಕೇವಲ ಪುಸ್ತಕ ಪಾಂಡಿತ್ಯ, ವಿಷಯ ಸಂಗ್ರಹ ವೆನ್ನುವ ಮನೋಭಾವ ಇಂದು ವ್ಯಾಪಕವಾಗಿ ಬೆಳೆದಿದೆ. ಹೆಚ್ಚು ಅಂಕ ಗಳಿಸುವುದೇ ವಿದ್ಯಾಭ್ಯಾಸದ ಗುರಿಯಾಗಿದೆ. ವಿದ್ಯಾಭ್ಯಾಸದ ಸಾರ, ಮಾನಸಿಕ ಸ್ವಾಸ್ಥ್ಯ ಮತ್ತು ಏಕಾಗ್ರತೆ ಜನಸಾಮಾನ್ಯರ ಜೀವನೋಪಾಯಕ್ಕೆ ಸಹಾಯಕವಾಗ ಬೇಕು. ಶುದ್ಧವಾದ ಚಾರಿತ್ರ್ಯ. ಮಾನವೀಯ ಅನುಕಂಪ ಹೃದಯ ಶ್ರೀಮಂತಿಕೆ, ಸಿಂಹ ಸದೃಶ ಧೈರ್ಯವಂತಿಕೆ ಮೂಡಬೇಕು. ನಮ್ಮ ಜೀವನಾಭ್ಯುದಯಕ್ಕೆ ಸಹಾಯಕವಾಗಿ ತನ್ನ ಸ್ವಂತ ಕಾಲಮೇಲೆ ನಿಂತುಕೊಳ್ಳುವುದಕ್ಕೆ ಸಹಾಯ ಮಾಡುವುದೇ ನಿಜವಾದ ವಿದ್ಯೆ ನಮ್ಮಲ್ಲಿ ಸುಪ್ತವಾಗಿರುವ ಚೈತನ್ಯವನ್ನು ಜಾಗೃತಗೊಳಿಸಿ ಪರಿಪೂರ್ಣತೆಯ ಕಡೆ ಒಯ್ಯುವ ಸಾಮರ್ಥ್ಯವನ್ನು ತಂದು ಕೊಡುವುದೇ ನೈಜ ಶಿಕ್ಷಣದ. ಇದುವೇ ಇಂದಿನ ಶಿಕ್ಷಣದ ಧ್ಯೇಯೋದ್ದೇಶಗವಾಗಬೇಕು.

## ಸಿದ್ಧಗಂಗಾ ಮಾಸ ಪತ್ರಿಕೆಯ ಸಲಹಾ ಮಂಡಳಿ



## ಸಂಪಾದಕ ಮಂಡಳಿ



## ಲೇಖಕರಲ್ಲಿ ಮನವಿ

'ಸಿದ್ಧಗಂಗಾ' ಶ್ರೀ ಸಿದ್ಧಗಂಗಾ ಮಠದಿಂದ ಪ್ರಕಟವಾಗುತ್ತಿರುವ ಮಾಸ ಪತ್ರಿಕೆ. ಶ್ರೀಮಠದ ಹಳೆಯ ವಿದ್ಯಾರ್ಥಿ ಸಂಘದ ಹೆಮ್ಮೆಯ ಸೇವಾ ಪುರವಣಿ; ಮೇಲಾಗಿ ಶ್ರೀಮಠದ ಮುಖವಾಣಿ. ಪೂಜ ಶ್ರೀ ಶ್ರೀ ಡಾ॥ಶಿವಕುಮಾರ ಮಹಾಸ್ವಾಮಿಗಳವರ ದಿವ್ಯ ಮಾರ್ಗದರ್ಶನದಲ್ಲಿ ಮುನ್ನಡೆದಿರುವ ಪತ್ರಿಕೆ, ತ್ರಿವಿಧ ದಾಸೋಹ ಸೇವಾ ತತ್ಪರತೆಯಿಂದ ಹೆಜ್ಜೆ ಹಾಕುತ್ತಿದೆ. ಈ ಧ್ಯೇಯ ಸಾಧನೆಗಾಗಿ ನಾಡಿನ ಗಣ್ಯ ಲೇಖಕರಿಂದ ಸಾಹಿತ್ಯ, ಸಂಸ್ಕೃತಿ, ಧರ್ಮ, ವಿಜ್ಞಾನ, ಶಿಕ್ಷಣ, ಇತಿಹಾಸ, ವೈಚಾರಿಕ, ಚಿಂತನ, ಮುಂತಾದ ಲೇಖನಗಳನ್ನು ಸ್ವಾಗತಿಸುತ್ತದೆ. ಅಸ್ವೀಕೃತ ಲೇಖನಗಳನ್ನು ಪಡೆಯಲು ಸಾಕಷ್ಟು ಅಂಚೆ ಸ್ಟಾಂಪುಗಳನ್ನು ಲಗತ್ತಿಸಿರಬೇಕು. ಲೇಖನಗಳಲ್ಲಿ ಸೂಕ್ತ ಬದಲಾವಣೆ ಮಾಡಿಕೊಳ್ಳುವ ಅಧಿಕಾರ ಸಂಪಾದಕರಿಗಿದೆ. ಅನುವಾದ, ರೂಪಾಂತರ ಲೇಖನಗಳಿಗೆ ಮೂಲ ಕೃತಿಕಾರರ ಅನುಮತಿ ಪಡೆದಿರಬೇಕು. ಸ್ವೀಕೃತ ಲೇಖನಗಳಿಗೆ ಸೂಕ್ತ ಸಂಭಾವನೆ ಕೊಡಲಾಗುವುದು.



## ಶ್ರೀ ಸಿದ್ಧಲಿಂಗೇಶ್ವರ ವಚನ

ಹರಿವ ನೀರ ಮಧ್ಯದಲ್ಲಿ
ಉರಿವ ಜ್ಯೋತಿಯ ಬೆಳಗ ನೋಡಿಕಂಡೆನಯ್ಯಾ.
ಸಾರಿರ್ದುನೋಡಿದರೆ, ನೀರೊಳಗೆ ಮುಳುಗಿ ಉರಿವುತ್ತಿದೆನೋಡಾ
ದೂರದಲ್ಲಿರ್ದುನೋಡಿದರೆ, ನೀರಮೇಲೆ ಉರಿವುತ್ತಿದೆ ನೋಡಾ.
ಇದೇನೋ ! ಇದೇನೋ !!

ಜ್ಯೋತಿಯ ಗುಣವೋ, ತನ್ನ ಭ್ರಾಂತಿನ ಗುಣವೋ ಎಂದು,
ಸ್ವಯಜ್ಞಾನ ಗುರುಮುಖದಿಂದ ವಿಚಾರಿಸಲು
ಹರಿವ ನೀರು ಬತ್ತಿತ್ತು ; ಜ್ಯೋತಿಯುಳಿಯಿತ್ತು
ಆ ಉಳಿದ ಉಳಿಮೆಯೇ ತಾನೆಂದು ತಿಳಿದಾತನಲ್ಲದೆ ಶಿವಶರಣನಲ್ಲಕಾಣಾ
ಮಹಾಲಿಂಗ ಗುರು ಶಿವ ಸಿದ್ದೇಶ್ವರ ಪ್ರಭುವೇ

ಹರಿವ ನೀರೆಂದರೆ ಸಕಲ ಪ್ರಪಂಚ. ಉರಿವ ಜ್ಯೋತಿ ಯೆಂದರೆ ಸುಜ್ಞಾನ ಜ್ಯೋತಿಪ್ರಭೆ: ಸಾರಿರ್ದುನೋಡಿದೆನೆಂದರೆ ಸುಜ್ಞಾನ ನೇತ್ರ ದಿಂದ ನಿರೀಕ್ಷಿಸುವುದು ನೀರೊಳಗೆ ಮುಳುಗಿ ಉರಿವುತ್ತದೆ ಎಂದರೆ ತನ್ನ ಮನೋಮಧ್ಯದಲ್ಲಿ ಪರಿಪೂರ್ಣವಾಗಿ ಸ್ವಯಂಜ್ಯೋತಿಯಾಗಿ ಬೆಳಗುತ್ತಿದೆ.

ದೂರದಲ್ಲಿರ್ದುನೋಡಿದೆ ಎಂದರೆ ಪ್ರಾಪಂಚಿಕ ವ್ಯವಹಾರವೊಂದಿಗೆ ವರ್ತಿಸುವ ಆತ್ಮದ ಅಜ್ಞಾನ ದೃಷ್ಟಿಗೆ ಗೋಚರಿಸದೆ,

ನೀರಮೇಲೆ ಉರಿವುತ್ತಿದೆ ಎಂದರೆ ಉಪಚಾರಿಯಾಗಿ ಸ್ವಯಂ ಜ್ಯೋತಿ ತನಗೆ ತಾನೆ ಬೆಳಗುತ್ತಿದೆ.

ಇದೇನೋ ಇದೇನೊ ಎಂದರೆ ಸ್ವಾನುಭಾವಕ್ಕೆ ಸಂದ ಜ್ಞಾನಗುರುವಿನಿಂದ ಸದಸದ್ವಸ್ತುವನು ವಿಚಾರಿಸುವುದು ಜ್ಯೋತಿಯ ಗುಣವೋ ಎಂದರೆ ಜ್ಞಾನದ ಅರಿವೋ. ಗುರುಮುಖದಿಂದ ವಿಚಾರಿಸಲು ಎಂದರೆ ಸ್ವಾನುಭವ ತಿಳಿವಿನಿಂದ ವಿವೇಚಿಸುವುದು.

ಹರಿವನೀರು ಬತ್ತಿತ್ತು ಎಂದರೆ— ಪ್ರಾಪಂಚಿಕ ಮುಖಿಯಾದಮನಸ್ಸನ್ನು ಲಿಂಗಾಂಗ ಸಮರಸದ ಕಡೆಗೆ ತಿರುಗಿಸುವುದು. ಜ್ಯೋತಿಯುಳಿಯಿತ್ತು ಎಂದರೆ ಶರಣರು ಲಿಂಗಮುಖಿಯಾಗಿಚರಿಸಿದಾಗ, ಮನದ ಚಂಚಲತೆಯಳಿದು ಕೇವಲ ವಸ್ತು ಸ್ವರೂಪವಾಗುವದು. ಆ ಉಳಿದ ಉಳಿಮೆಯೇ ತಾನೆಂದು ತಿಳಿದಾತ ನೆಂದರೆ - ಆಸ್ವಯಂ ಜ್ಯೋತಿಯೆ ತಾನೆಂದು ತಿಳಿದವನೇ .ಶರಣ ಮನೋಮಧ್ಯದಲ್ಲಿ ಬೆಳಗುತ್ತಿರುವ ಸುಜ್ಞಾನವೆಂಬ ಜ್ಯೋತಿ ಸಕಲ ಪ್ರಪಂಚದ ಮಧ್ಯೆಯಿದ್ದು ವ್ಯವಹರಿಸುತ್ತಿದೆ. ಸ್ವಾನುಭವ ದಿಂದರಿದು ಚಿಂತಿಸಿದಾಗ ಪ್ರಾಪಂಚಿಕದವ್ಯವಹಾರದಲ್ಲಿ ಮುಳುಗಿರುವೆನೆಂಬ ಅರಿವುಂಟಾಗುತ್ತದೆ. ಪ್ರಾಪಂಚಿಕದಲ್ಲೇ ಮುಳುಗಿ ಹೋದಾಗ ಜ್ಞಾನದೃಷ್ಟಿಗೆ ತಡೆಯೊಡ್ಡಿದಂತಾಗುತ್ತದೆ, ಇದೇನು ಆಶ್ಚರ್ಯ ವೆಂದು ಪರಿಭಾವಿ ಸಿದಾಗ- ಜ್ಞಾನದಿಂದ ಹೀಗಾಯಿತೇ ? ತನ್ನ ಭ್ರಾಂತಿಯಿಂದ ಹೀಗಾಯಿತೇ ? ಎಂದಾಗ– ಸ್ವಾನುಭವದ ಅರಿವಿನಿಂದ ತಿಳಿಯುವುದಿಷ್ಟು– ಪ್ರಾಪಂಚಿಕ ಮೋಹ- ನಿಂತು, ಜ್ಞಾನಮುಖಿಯಾದಾಗ ಅಂಥ ಜ್ಞಾನಸ್ವರೂಪಿಯೇ ಶರಣನೆಂದರಿ- ಯುವುದು.

❀ ❀ ❀ ❀ ❀

ಎಲವೊ ಎಲವೋ, ಪಾಪಕರ್ಮವ ಮಾಡಿದವನೇ,
ಎಲವೋ ಎಲವೋ, ಬ್ರಹ್ಮಹತ್ಯವಮಾಡಿದವನೇ,
ಒಮ್ಮೆ ಶರಣೆನ್ನೆಲ್ಲವೋ
ಒಮ್ಮೆ ಶರಣೆಂದರೆ ಪಾಪಕರ್ಮಗಳುಓಡುವುವು,
ಸರ್ವ ಪ್ರಾಯಶ್ಚಿತ್ತಕ್ಕೆ ಹೊನ್ನ ಪರ್ವತಂಗಳೈದವು
ಓರ್ವಂಗೆ ಶರಣೆನ್ನು, ನಮ್ಮ ಕೂಡಲ ಸಂಗಮದೇವಂಗೆ.



# ಸಂಪಾದಕೀಯ

## ಬಸವ ಜಯಂತಿ

ಬಸವಣ್ಣ ಜಗತ್ತುಕಂಡ ಅಪೂರ್ವಚೇತನ- ಯುಗಯುಗಳು ಉರುಳಿದರೂ ಉಳಿದು ಬರುವಂಥವು. ಆ ಮಹಾನುಭಾವ ಬಿತ್ತಿದ ವಿಚಾರಗಳು. ಲೋಕದ ಧರ್ಮ ದೀಪಕರು ಹೇಳಿರುವ ಎಲ್ಲ ಸಂದೇಶಗಳನ್ನು ಅಳವಡಿಸಿಕೊಂಡು ವಿಶ್ವಮಾನ್ಯ ವಾಗುವ ತತ್ವಗಳನ್ನು ಸಾರಿದ್ದು ಬಸವಣ್ಣನವರ ಹೆಗ್ಗಳಿಕೆ- ಕೇವಲ ಉಪದೇಶಕನಾಗಿ, ಆಚಾರ್ಯನಾಗಿ, ಯಜಮಾನನಾಗಿ ಬರಲಿಲ್ಲ ಬಸವಣ್ಣ. ತಾನು ಹೇಳಿದ ಎಲ್ಲ ಮಾತುಗಳನ್ನು ಬದುಕಿ ತೋರಿಸಿದ. ಆಧ್ಯಾತ್ಮವನ್ನು ಜೀವನದಿಂದ ಪ್ರತ್ಯೇಕಿಸದೆ ಅದರೊಂದಿಗೇ ಬೆಸೆದು ವಿಶೇಷ ಅರ್ಥವನ್ನು ತಂದು ಕೊಟ್ಟದ್ದು ಜಗತ್ತಿನ ಧಾರ್ಮಿಕ ಇತಿಹಾಸದಲ್ಲಿಯೇ ಅಪರೂಪವಾದುದು. ಸಂಪ್ರದಾಯಗತವಾಗಿ ಬೆಳೆದು ಬಂದು ಬೇರು ಬಿಟ್ಟಿದ್ದ ಬಿಳಲು ಬಿಟ್ಟಿದ್ದ ನೂರಾರು ಮೌಢ್ಯಗಳಿಗೆ, ಪಟ್ಟ ಭದ್ರ ಹಿತಾಸಕ್ತಿಗಳ ಶೋಷಣೆಯ ರಾಜ ಮಾರ್ಗಗಳಿಗೆ ಪರಿಹಾರ ನೀಡಿದ ಪಾವನಮೂರ್ತಿಯಾದ. ಬಾಯಿಲ್ಲದವರಿಗೆ ಬಾಯಾಗಿ ಬಂದ. ದನಿಯಿಲ್ಲದವರಿಗೆ ದನಿಯಾಗಿ ಬಂದ. ವಿದ್ಯೆ ಕೆಲವರ ಸ್ವತ್ತಾಗಿದ್ದನ್ನು ಎಲ್ಲರ ಸಂಪತ್ತಾಗುವಂತೆ ಮಾಡಿದ. ಅಸ್ಪೃಶ್ಯರನ್ನು ಗೌರವಿಸಿದ. ಘನತೆಯಿತ್ತು ಮೇಲೆತ್ತಿದ. ' ಮಹಾಮಾಹೇಶ್ವರರೆಂದು ' ಅಪ್ಪಿಕೊಂಡ. " ಅಪ್ಪನು ಮಾದಾರ ಚೆನ್ನಯ್ಯ, ಬೊಪ್ಪನು ಡೋಹಾರ ಕಕ್ಕಯ್ಯ " ನೆಂದು ಎದೆತುಂಬಿ ಹಾಡಿ ಹಾಡಿ ಆನಂದಿಸಿದ. ಕೇವಲ ಭೋಗ್ಯವಸ್ತುವೆಂದು ಕಾಣುತ್ತ ಬಂದಿದ್ದ ಹೆಣ್ಣನ್ನು ಉದ್ಧಾರದ ಹಾದಿಗೆ ತಂದು ಮಾರ್ಗತೋರಿಸಿದ. ಪರವಧುವನು ಮಹಾದೇವಿಯೆಂದು ಪೂಜ್ಯ ಭಾವದಿಂದ ಗೌರವಿಸಿದ. ಜಗತ್ತಿನ ಜನಾಂಗವನ್ನು ಒಳಿತು ಕೆಡುಕುಗಳ ಆಧಾರದ ಮೇಲೆ ಭಕ್ತಿ-ಭವಿ ಎಂದು ವಿಭಜಿಸಿದ ಈ ಗುಣನಿಷ್ಠ ವಿಭಜನೆಯ ಹಿಂದೆ ಕಾಯಕ-ದಾಸೋಹ- ಆತ್ಮಾನುಪರೀಕ್ಷೆಗಳನ್ನು ವಿವೇಚಿಸಿದ. ದೇವರಿಗೆ ಕೇವಲ ಸಂಸ್ಕೃತ ಮಾತ್ರ ತಿಳಿಯುತ್ತದೆ ಎಂಬ ಹುಸಿ ಭ್ರಮೆಯಲ್ಲಿ ' ಗಿಳಿಯೋದು ' ಓದಿದ ಪಂಡಿತರಿಗೆಲ್ಲ ಸ್ಪಷ್ಟವಾಗಿ ತಿಳಿಯ ಹೇಳಿದ ದೇವರಿಗೆ ಕನ್ನಡವೂ ಅರ್ಥವಾಗುತ್ತದೆ ಎಂದು. ಅಂತೆಯೇ ತನ್ನ ಎಲ್ಲ ಭಾವನೆಗಳನ್ನು, ಆಲೋಚನೆ, ಅನಿಸಿಕೆಗಳನ್ನು ಕನ್ನಡದಲ್ಲಿಯೇ ಹೇಳಿದ. ಅದರಿಂದಾಗಿ ಕನ್ನಡ ಭಾಷೆಗೆ ಹೊಳಪು ಬಂತು; ಬೆಳಕಿನಕಲಶಮೂಡಿತು. ಅನುಭವದ ಬೆಳಕಿನಲ್ಲಿ ಆತ್ಮಜ್ಞಾನವನ್ನು ಬೆಳಗಿದ. ಅನುಭವಿಗಳನ್ನೆಲ್ಲ ಅಪ್ಪಿಕೊಂಡ, ಆಹ್ವಾನಿಸಿದ, ಆದರಿಸಿದ - ಅವರ ವಿಚಾರಗಳನ್ನೆಲ್ಲ. ಅಕ್ಷರಸ್ಥ ಅನಕ್ಷರಸ್ಥರೆನ್ನದೆ, ವಿಪ್ರ--ಅಂತ್ಯಜರೆನ್ನದೆ ಗಂಡು ಹೆಣ್ಣೆನ್ನದೆ,

ಎಲ್ಲರನ್ನೂ ಮಹಾಮನೆಯ ವಿಚಾರಮಂಟಪಕ್ಕೆ ಸ್ವಾಗತಿಸಿದ. ಅಲ್ಲಿನ ಸತ್ಯ
ಶುದ್ಧ ಅನುಭವವಾಣಿಗೆ ಶಾಶ್ವತರೂಪಕೊಟ್ಟ. ತಾನಿದ್ದ ಪಟ್ಟಣವನ್ನೇ
ಪ್ರಣತಿಯನ್ನಾಗಿಸಿ, ತನ್ನ ಪ್ರೀತಿಯನ್ನೇ– ಪವಿತ್ರ ಪ್ರೀತಿಯನ್ನೇ ಎಣ್ಣೆಯನ್ನಾ
ಗಿಸಿ, ತನ್ನ ನಡೆ ನುಡಿಯನ್ನೇ ಬತ್ತಿಯನ್ನಾಗಿಸಿ, ತಾನೇ ಜ್ಯೋತಿಯಾಗಿ
ಮುಟ್ಟಿದಾಗ 'ಶಿವನ ಪ್ರಕಾಶ' ತೊಳಗಿ ಬೆಳಗುವಂತೆ ಬಾಳಿದ. ಬಸವಣ್ಣ
ಮನುಕುಲಕ್ಕೆಕೊಟ್ಟ ಮಹಾಸಂದೇಶ ಕಾಯಕ--ದಾಸೋಹ ಮತ್ತು ಮಾನವತಾ
ವಾದ. ಬಸವಣ್ಣನಂತೆ ಜಗತ್ತನ್ನು ಪ್ರೀತಿಸಿದ, ಆಲಿಂಗಿಸಿದ. ಗೌರವಿಸಿದ
ಮತ್ತೊಬ್ಬರನ್ನು ಕಾಣುವುದುಕಷ್ಟ. "ಇವನಾರವ ಇವನಾರವ ಇವನಾರವ ಎನ್ನದೆ,
ಇವನಮ್ಮವ ಇವನಮ್ಮವ ಇವನಮ್ಮವನೆಂದೇ" ಪ್ರೇಮದಿಂದ ಬಾಳಿದ'

ಬಸವ ಜಯಂತಿಯನ್ನಾಚರಿಸುತ್ತಿರುವ ನಾವಿಂದು ಅರಿತು ನಡೆಯಬೇಕಾ-
ದುದು ಬೆಟ್ಟದಷ್ಟಿದೆ. ಬಸವತತ್ವಾಭಿಮಾನಿಗಳೆಲ್ಲ ಸಂಘಟಿತರಾಗಬೇಕು. "ಬಸವಣ್ಣ"
ಎಲ್ಲರವನು' ಎಲ್ಲಕಾಲದವನು, ಹಿಂದೆಂದಿಗಿಂತ ಇಂದು ಹೆಚ್ಚು ಪ್ರಸ್ತುತನು ಎಂಬು-
ದನ್ನು ಮನಗಾಣಿಸುವ ಮಹಾ ಮಣಿಹದಲ್ಲಿ ಸಂಕಲ್ಪ ದೀಕ್ಷಿತರಾಗಬೇಕಾಗಿದೆ.

❁ ❁ ❁ ❁ ❁

ದೀನರ ದೀಪಕನಾದಾತ ಬಸವಣ್ಣ
ದಲಿತರ ದನಿಯಾದಾತ ಬಸವಣ್ಣ
ಬಡವರ ಬಂಧುವಾದಾತ ಬಸವಣ್ಣ
ಆರ್ತರ ಆಶಾಕಿರಣವಾದಾತ ಬಸವಣ್ಣ
ಮಹಿಳೆಯರ ಕುಲೋದ್ಧಾರಕ ಮಹಾಮಾನವತಾವಾದಿ
ಬಸವಣ್ಣ
ಶೋಷಕರ ಶೂಲವಾದಾತ ಬಸವಣ್ಣ
ಕಾಯಕದ ಕಲಿಯಾದಾತ ಬಸವಣ್ಣ
ದಾಸೋಹದ ದಾರ್ಶನಿಕನಾದಾತ ಬಸವಣ್ಣ
ಇಂತಪ್ಪ ಬಸವಣ್ಣನ ದರುಶನವ ಮಾಡಿಸಿದ ಎಂದರುಹಿ
ಎನ್ನ ಪರಮಾರಾಧ್ಯ ಶ್ರೀ ಸಿದ್ಧಗಂಗಾ ಶ್ರೀ ಗುರು
ನಿಮ್ಮ ಶ್ರೀ ಪಾದಕ್ಕೆ ನಮೋ ನಮೋ ಎನುತಿರ್ದೆನು.



( ಹಿಂದಿನ ಸಂಚಿಕೆಯಿಂದ ಮುಂದುವರೆದಿದೆ )



# ಜನಪದ ಸಾಹಿತ್ಯದಲ್ಲಿ ವೀರಶೈವ ಧರ್ಮ

ಶ್ರೀ ಹೆಚ್. ವಿ. ವೀರಭದ್ರಯ್ಯ



ಇಷ್ಟಲಿಂಗ ಪೂಜೆ ವೀರಶೈವದ ಪ್ರಧಾನ ಲಕ್ಷಣ. ಇಷ್ಟಲಿಂಗವೊಂದೇ ವೀರಶೈವರ ಪರಮ ಆರಾಧ್ಯಮೂರ್ತಿ. ಆ ಲಿಂಗದ ಉದ್ದೇಶ ಮತ್ತು ಉಪಾಸನಾಕ್ರಮಗಳನ್ನು ತಿಳಿಸಿಕೊಡಲು ಇರುವ ವ್ಯಕ್ತಿರೂಪಗಳೇ ಗುರು ಮತ್ತು ಜಂಗಮ. ಜಗತ್ತಿನ ಯಾವುದೇ ಧರ್ಮವನ್ನು ಅವಲೋಕಿಸಿದರು ಒಂದು ಧರ್ಮಕ್ಕೆ ಒಬ್ಬನೇ ಗುರು ಇರುವುದು ಕಾಣಬರುತ್ತದೆ. ಆದರೆ ವೀರಶೈವ ಧರ್ಮದಲ್ಲಿ ಗುರು ಮತ್ತು ಜಂಗಮರಿಬ್ಬರಿದ್ದಾರೆ. ಇದೇ ಧರ್ಮದ ವೈಶಿಷ್ಟ್ಯ. ಗುರುಕ್ರಿಯಾಮೂರ್ತಿ ಯಾದರೆ, ಜಂಗಮಜ್ಞಾನಮೂರ್ತಿ, ಅಲ್ಲದೆ ಗುರು ಜಂಗಮ ಎಂಬಿವು ಪ್ರತ್ಯೇಕವಲ್ಲ. ಅವು ಸಾಧಕನಪ್ರಗತಿ ಪಥದ ಬೇರೆ ಬೇರೆ ಹಂತಗಳು. ಗುರು, ಜಂಗಮನಾಗಬಲ್ಲ, ಜಂಗಮ ಗುರುವಾಗ ಬಲ್ಲ. ಆದರೆ ವೀರಶೈವ ಧರ್ಮದಲ್ಲಿ ಗುರುವರ್ಗ, ಜಂಗಮವರ್ಗ ಎಂಬ ಭಿನ್ನಶ್ರೇಣಿ ಏರ್ಪಟಿದ್ದು "ಲೋಕದ ಡೊಂಕು" ಎನ್ನಬೇಕು. ಗುರು, ಜಂಗಮರ ಮಧ್ಯದಲ್ಲಿ ಲಿಂಗವಿದೆ. ಲಿಂಗ ಭಕ್ತನ ಸಂಕೇತ. ಲಿಂಗವಿದ್ದವನೇ ಭಕ್ತ. ಲಿಂಗವನ್ನು ಎಂದರೆ ಭಕ್ತನನ್ನು ಕೈಹಿಡಿದು ನಡೆಸುವ ಮಹಾಚೇತನಗಳು ಗುರುಜಂಗಮರು. ಅಂತಹ ಗುರುವನ್ನು ಜಾನಪದ ಸಾಹಿತ್ಯ ಹೃದಯ ತುಂಬಿ ಹಾಡುತ್ತದೆ.

ಗುರುವೀನ ನೆನೆದೇನ ಗುರುಸ್ವಾಮೀ ನೆನೆದೇನ
ಗುರುವೀನ ಗುರುವ ನೆನೆದೇನ । ನನ್ನೂರ
ಹಿರಿಯ ಮಠದವರ ನೆನೆದೇನ ॥

ಮುಗ್ಧ ಮನದ ಜನಪದರಿಗೆ ಗುರುವನ್ನು, ಗುರುಸ್ವಾಮಿಯನ್ನು ಸ್ಮರಿಸುವಲ್ಲಿ ಇನ್ನಿಲ್ಲದ ಆನಂದ. ಅದರಲ್ಲೂ " ಗುರುವಿನ ಗುರುವನ್ನು' ಜಂಗಮವನ್ನು ನೆನೆದೇ ಬದುಕೇನ ಎನ್ನುತ್ತದೆ. 'ಗುರುವಿದ ಗುರು ಜಂಗಮ' ಎನ್ನುತ್ತದೆ. ವೀರಶೈವಧರ್ಮ ಮತ ಮಾನ್ಯಗಳಲ್ಲಿ ನೆಲೆಸಿದರೂ ಗುರು ಜಂಗಮರ ಕರ್ತವ್ಯಗಳು ಗುರುತರವಾಗಿದ್ದವು. ಭಕ್ತಸಮೂಹ ಧರ್ಮಾಚರಣೆಯಲ್ಲಿ ತಪ್ಪದ ಹಾಗೆ ನೋಡಿ ಕೊಳ್ಳುವ ಜವಾಬ್ದಾರಿ

ಅವರದು. ಅಂಥ ಗುರುಗಳನ್ನು ಜನಪದರು ಶರಣು ಮಾಡಿಯೇ ದಿನದ ಬಾಳನ್ನು ಆರಂಭಿಸುತ್ತಾರೆ

ಶರಣೆಂಬೆ ಗುರುವಿಗೆ ಶರಣೆಂಬೆ ಶಿವನಿಗೆ
ಶರಣೆಂಬೆ ಶಿವನ ಮಡದೀಗೆ । ಗೌರಮ್ಮಗೆ
ಶರಣೆಂದು ಕಲ್ಲ ಹಿಡಿದೇನು ॥

ಮುಂಗೋಳಿ ಕೂಗಿದಾಗ. ಮೂಡ ಕೆಂಪೇರುವ ಮುನ್ನ, ಬೀಸುವಕಲ್ಲಿಗೆ ಕೈ ಹಚ್ಚಿ ಕುಳಿತ ಗರತಿ ಮೊದಲು ಶರಣೆನ್ನುವುದು ಗುರುವಿಗೆ ಅನಂತರ ಶಿವನಿಗೆ. ಅವಳಿಗೆ ಗೊತ್ತು ಮಡಕೆಯ ಮಾಡುವೊಡೆ ಮಣ್ಣೇ ಮೊದಲು ಶಿವಪಥ ವರಿವೊಡೆ ಗುರು ಪಥವೇ ಮೊದಲು ಎಂಬುದು ತಾನು ಶಿವಪಥ, ವರಿಯ ಬೇಕಾದರೆ ಗುರುವಿಗೆ ಶರಣೆನ್ನ ಬೇಕು ಎಂಬುದು. ಗುರುಮುಟ್ಟಿ ಗುರುವಾಗುವುದನ್ನು ಅವಳು ಬಲ್ಲಳು. ಅದಕ್ಕಾಗಿಯೇ " ಲಿಂಗ ಅಡಿಸೇರು, ಸೆಟ್ಟಿ ಸಿವಾ ಸೇರು " ಎಂಬುದನ್ನು ತಿಳಿಯ ಬಯಸ್ಯಾಳು. ಲಿಂಗದ ಅಡಿಸೇರುವಂತಾಗ ಬೇಕಾದರೆ ಸೆಟ್ಟಿಯ ಸಹವಾಸ ಸೇರಬೇಕಾದರೆ-ಗುರುವಿನ ಮಾರ್ಗದರ್ಶನ ಅತ್ಯಗತ್ಯ. ಏಕೆಂದರೆ ' ಧರಣಿಯ ಮೇಲೆ ಪಿರಿದಪ್ಪ ಅಂಗಡಿಯನಿಕ್ಕಿ ಹರದ ಕುಳ್ಳಿರ್ದ ನಮ್ಮ ಮಹಾದೇವಸೆಟ್ಟಿ, - ಅವನ ಸಹವಾಸ ಸುಮ್ಮನೆ ದೊರಕೊಳ್ಳುವಂಥದಲ್ಲ, ಅದಕ್ಕೆ ಸಾಧಕ ಜೀವನ ಬೇಕು ದಾರಿತೋರುವ ಗುರುಬೇಕು, ಆಚರಣೆಯಲ್ಲಿ ನಿಷ್ಠೆಯುಳಿಯದಂತಿರಬೇಕು.

ಅಂಗೈಯ ಒಳಗಿನ ಲಿಂಗ ಮೂರುತಿಸ್ವಾಮಿ
ಮಂಗಳಾರುತಿ ನಾ ಬೆಳಗಿ । ಬೇಡುವೆನು
ಮಾರಾಯರ ಮುಂದೆ ಮರಣಾವ ॥

ಎಂಬಂಥ ವೀರನಿಷ್ಠೆ ಬೇಕು. ಶರಣರು ಬರುವ ಎಡರು–ತೊಡರುಗಳನ್ನ ಎದೆ ಕೊಟ್ಟು ಸ್ವೀಕರಿಸಿದರು. " ನಾಳೆ ಬಪ್ಪುದು ನಮಗಿಂದೇ ಬರಲಿ, ಇಂದು ಬಪ್ಪುದು ಈಗಲೇ ಬರಲಿ ..... ಮರಣವೇ ಮಹಾನವಮಿ " ಎಂದು ಉಗ್ಗಡಿಸಿದರು. ಜನ ಪದದ ಗರತಿ ಇನ್ನೂ ಒಂದು ಹೆಜ್ಜೆ ಮುಂದೇ ಹೋದಳು. ತಾನು ತನ್ನ ಅಂಗೈಯ ಒಳಗಿನ ಲಿಂಗದಲ್ಲಿ ಬೇಡಿದ್ದು ಲೌಕಿಕದ ಭೋಗಭಾಗ್ಯಗಳನ್ನಲ್ಲ `ಮಾರಾಯರ ಮುಂದೆ ಮರಣವನ್ನು ; ಮತ್ತು ತಾನು ಪತಿಯ ಸನ್ನಿಧಿಯಲ್ಲೇ ಇಹಯಾತ್ರೆ ಮುಗಿಸ ಬೇಕೆಂಬುದನ್ನು.

ಲಿಂಗನಿಷ್ಠೆ, ಧರ್ಮದ ಆಚರಣಾ ಪ್ರಜ್ಞೆ ಶಿಥಿಲವಾಗುವುದನ್ನು ಕಂಡಾಗ ಕಟುವಾಗಿ ಬೈಯ್ಯಲೂ ಹಿಂದೆ ಮುಂದೆ ನೋಡಿಲ್ಲ ಜಾನಪದ ಸಾಹಿತ್ಯ. ಗುರು ವಿದ್ಯುಕ್ತವಾಗಿ ಕೊಟ್ಟಲಿಂಗವನ್ನು ಅಶ್ರದ್ಧೆಯಿಂದ ಕಂಡಾಗ, ಅವಜ್ಞೆ ಮಾಡಿದಾಗ ಕನಲಿಕೆಂಡವಾಗುತ್ತದೆ ಅದು.



ಕಟ್ಟಿದ ಲಿಂಗವನು ನೆಟ್ಟಗೂಟಕೆ ಹಾಕಿ
ನಿಟ್ಟಿಸದೆ ಮನೆಯಕೆಲಸವನು । ಮಾಡುಂಬ
ಭ್ರಷ್ಠರಿಗೆ ಎನ್ನಕೊಡಬೇಡ ॥

ಲಿಂಗವೇ ಗುರುವನ್ನು ಬೇಡಿದಂತಿರುವ ಈ ಚಿತ್ರ ಅದೆಂಥ ಪರಿಣಾಮಕಾರಿ! ಹೆಣ್ಣು ಮಕ್ಕಳಲ್ಲಿ, ಅದರಲ್ಲೂ ಲಿಂಗವಂತ ಸಮಾಜದ, ನಾಗರೀಕರೆಂದು ಕೊಂಡಿರುವ ಕಲಿತಹೆಣ್ಣು ಮಕ್ಕಳಲ್ಲಿ ಬೆಳೆದು ಬಂದಿರುವ ಅನಿಷ್ಠ ಪದ್ಧತಿಯನ್ನು ನೋಡಿದಾಗ ಲಂತೂ

ಮೋರೆಯನು ತೊಳೆಯಳ ತೋರಳು ಅನ್ನವನು
ಆರರಿಯದಂತೆ ಒಳಗೋಳಗೆ ತಿನ್ನುವ । ಛೀ
ಮಾರಿಗೆ ಎನ್ನಕೊಡಬೇಡ ॥

ಎಂದು ಬಿರು ನುಡಿಯುತ್ತದೆ, ದಾಸೋಹವನ್ನು ಮರೆತ ಹೆಣ್ಣಿಗೆ ತನ್ನನ್ನು ಕೊಡುವುದೇ ಬೇಡ ಎನ್ನುವ ಲಿಂಗದ ಈ ಗೋಳನ್ನು ನೋಡಿ

ಬಂದು ಜಂಗಮಲಿಂಗ ನಿಂದು ಭಿಕ್ಷವ ಬೇಡೆ
ಒಂದುತುತ್ತನ್ನು ಒಳಗಿದ್ದು ಇಲ್ಲೆಂಬ
ಹಂದಿಗೆ ಎನ್ನ ಕೊಡಬೇಡ ॥

ಎನ್ನುವುದಲ್ಲದೆ

ಜಂಗಮನ ನಿಂದಿಸುವರಂಗ ಜಹರನರಿಯದ
ಭಂಗ ಬಿಟ್ಟು ತಮ್ಮಲಿಂಗವನರಿಯದ
ಭಂಗಿ ಬಡುಕನಿಗೆ ಎನ್ನ ಕೊಡಬೇಡ ॥

ಎಂದು ಜಂಗಮನ ನಿಂದಿಸುವ, ಲಿಂಗವರಿಯದ, ದುವ್ಯಸನಿಗಳಿಗೆ ಲಿಂಗವೇಕೆ ? ಎನ್ನುತ್ತದೆ. ಮತ್ತು ಗುರುಕೊಟ್ಟ ಇಷ್ಟಲಿಂಗ ವಿರುವಾಗ ಅವನ್ನು ಬಿಟ್ಟು, ಹಲವು ಹನ್ನೊಂದು ಕ್ಷುದ್ರದೈವಗಳಿಗೆ ನಡೆಕೊಳ್ಳುವುದನ್ನು ತೀವ್ರವಾಗಿ ಖಂಡಿಸುತ್ತದೆ.

ತನ್ನಲಿಂಗವ ಬಿಟ್ಟು ಅನ್ಯದೈವಕೆಹೋಗಿ
ಬಣ್ಣ ಬಳಿದೊಟ್ಟು ವಿಸಲಸು । ಮಾಡುಂಬ
ಕುನ್ನಿಗೆ ಎನ್ನ ಕೊಡಬೇಡ ॥

" ಕಟ್ಟಿದ ಲಿಂಗವ ಬಿಟ್ಟು ಬೆಟ್ಟದ ಲಿಂಗಕ್ಕೆ ಹೋಗಿ ಹೊಟ್ಟೆ ಅಡಿಯಾಗಿ ಬೀಳುವಲೊಟ್ಟೆ ಮಾನವನ ಕಂಡರೆ ಎಡ ಪಾದರಕ್ಷೆ ತಕ್ಕೊಂಡು ಟಲಟಲನೆ ಹೊಡೆ ಯಂದಾತನಂಬಿಗರ ಚೌಡಯ್ಯ "—ಎಂಬ ವಚನ ನೆನಪಾಗುತ್ತದಲ್ಲವೆ. ಜನಪ-

ದರ ಈ ಮಾತನ್ನು ಕೇಳುವಾಗ. ಗುರುಕೊಟ್ಟ ಲಿಂಗವನ್ನು ಸದಾಹೃದಯಸ್ಥಲ ದಲ್ಲಿಯೇ ಕಟ್ಟಿರ ಬೇಕಲ್ಲವೇ ? ಅದನ್ನು ಬಿಟ್ಟು ಸೊಂಟದ ಕೆಳಗೆ ಇಳಿ ಬಿಡುವುದನ್ನು, ಸೀರೆಯ ಸೆರಗಿನಲ್ಲಿ ಕಟ್ಟುವುದನ್ನು ಜನಪದ ಸಾಹಿತ್ಯ ವಿರೋಧಿ ಸುತ್ತದೆ.

ನಾರೀ ತನ್ನಲಿಂಗವನು ಸೀರೆ ಸೆರಗಲಿ ಕಟ್ಟಿ
ಸೀರೆಮಾಸಿದರೆ ಅಗಸನಿಗೆ, ಹಾಕುಂಬ
ಮಾರಿಗೆ ಎನ್ನಕೊಡಬೇಡ ॥

ಅಶ್ರದ್ಧೆಯಿಂದಲೋ. ಅರಿಯದೆಯೋ, ಗುರುಜಂಗಮರ ಮಾರ್ಗದರ್ಶನದ ಅಭಾವದಿಂದಲೋ ಇಂಥ ಪ್ರಮಾದಗಳಾಗಿರುವುದು ಸಂಭವ. ಅದನ್ನುತಿದ್ದಿಕೊಳ್ಳುವ ಸಲುವಾಗಿ ಜನಪದರು ಹೀಗೆಲ್ಲಾ ಬೋಧಿಸಿದ್ದಾರೆ. ಆಸೆಗಳಿಗಾಗಿ. ಆಮಿಷಕ್ಕಾಗಿ. ಗುರುಗಳು ಲಿಂಗದೀಕ್ಷೆಯನ್ನು ಕೊಟ್ಟಿರಬೇಕು. ಅಂತಹ ಸಂದರ್ಭದಲ್ಲಿಯೂ ಲಿಂಗ ಗುರುವನ್ನು ಬೇಡಿದ ಈ ಚಿತ್ರ ನೋಡಿ:

ಅನ್ನ ಹಚ್ಚಡ ತೇಜಿ ಹೊನ್ನಿಗಾಸೆಯಮಾಡಿ
ಚೆನ್ನಾಯಿತೆನುತ ನೀನೆನ್ನಕೊಟ್ಟರೆ
ಘನ್ನ ಪಾತಕವು ಗುರುಸ್ವಾಮಿ ॥

ಲೌಕಿಕವಾದ ಆಸೆ ಆಕಾಂಕ್ಷೆಗಳಿಂದ ಲಿಂಗವನ್ನು ಕೊಡುವುದುಗುರುವಿಗೂ ಪಾತಕವವನ್ನು ತರದೆ ಬಿಡದು ಎನ್ನುವ ಜನಪದರ ಮಾತಿನಲ್ಲಿರುವ ಕೆಚ್ಚನ್ನು ಗಮ ನಿಸಬೇಕು. "ಅಳಮನದವಂಗೆ ಶಿವದೀಕ್ಷೆಯ " ಕೊಡಲಾಗದು ಎಂದಲ್ಲವೆ ಬಸ- ವಣ್ಣನವರುಹೇಳಿದ್ದು, ಅದು ಅಷ್ಟು ಪರಿಣಾಮಕಾರಿಯಾಗಿ ಜಾನಪದ ಸಾಹಿತ್ಯ ದಲ್ಲಿ ಪ್ರತಿಬಿಂಬಿಸಿತು, ಲಿಂಗಾಂಗಿಯಾದವನು ಯಾವಜ್ಜೀವನವೂ ಲಿಂಗ ಸಂಗಿ ಯಾಗಿಯೇ ಇರಬೇಕು. ಲಿಂಗ ವಿರಹಿತವಾಗಿ ಇರಬಾರದು, ವಾತುಲಾಗಮದಲ್ಲಿ "ಮನುಷ್ಯರನ್ನು ಶುದ್ಧಿಮಾಡುವುದರಿಂದ ಲಿಂಗವು 'ಪವಿತ್ರಂ', ಎಂದು ಹೇಳಲ್ಪ ಡುತ್ತದೆ. ಆದ್ದರಿಂದ ಎಲ್ಲ ಕಾಲದಲ್ಲಿಯೂ ಲಿಂಗಧಾರಣೆ ಮಾಡಬೇಕು. ಲಿಂಗ ಧರಿಸಿದವನು ಯಾವಾಗಲೂ ಶುದ್ಧನಾಗಿರುತ್ತಾನೆ" ಎಂದು ಹೇಳಿದೆ, ಆದುದರಿಂ- ದಲೆ.

ಇಷ್ಟಲಿಂಗ ಸ್ತೋತ್ರ ನಿಷ್ಠೆಯಿಂ ಜಪಿಸಿದರೆ
ಕಷ್ಟಕಾರ್ಪಣ್ಯ ಹರಿವುವು । ಸೃಷ್ಟಿಯೊಳು
ಇಷ್ಟಲಿಂಗದ ಸಂಗ ಬಿಡಬೇಡ ॥



ಎನ್ನುತ್ತದೆ ಜನಪದವಾಣಿ. ಇಷ್ಟಲಿಂಗದ ಮಹತ್ವ ತಿಳಿದ ನಂತರ ಸೃಷ್ಟಿಯನ್ನು ಲ್ಲೆಲ್ಲಾ ಅದರಪ್ರತಿಬಿಂಬ ಕಾಣುತ್ತದೆ. ಆಗಗುಡಿಯೊಳಗೆ ದೇವರನ್ನು ಹುಡುಕಲು ತೊಡಗುವುದಿಲ್ಲ.

ಆರೂತಿ ಹಿಡಕೊಂಡು ಅರಣ್ಯತಿರಗ್ಯಾಳೆ
ದೇವರಿಲ್ಲೇನ ಗುಡಿಯಾಗ । ಕೊಟ್ರೇಶ
ಸಾವಿರ ಮಂಡ್ಯಾಗ ಅಡಗ್ಯಾನ ॥

ಎಂದು ಸಾವಿರ ಮಂದಿಯಲ್ಲಿ ಅವನಿರವನ್ನುಕಾಣುತ್ತದೆ. "ಅಡವಿಯೊಳ ಗರಸುವೊಡೆ ಸಿಡಿಗಂಟೆ ತಾನಲ್ಲ; ಮಡುವಿನೊಳಗರ ಸುವೊಡೆ ಮತ್ಸ್ಯ ಮಂಡುಕನಲ್ಲ ಅದು ತನ್ನಂತೆ ಪರರನ್ನು ಕಾಣುವ ಉದಾತ್ತ ನಿಲುವಿಗೆ ಏರುತ್ತದೆ. ಅಂಥ ನಿಲುವಿ ಗೇರಿದ ಸಾಧಕ ಜೀವಿಗೆ

ಕೈಲಾಸ ಕೈಲಾಸ ಕಾಣದ ಕೈಲಾಸ
ತಿಳಿಯದವರಿಗೆ ಮೋಸ! ಈ ಕಾಯ
ಶಿವಹರನ ಹಿರಿಯ ಮಂದಾಸ ॥

ಎಂಬ ಭಾವನೆ ಸ್ವಾನುಭಾವಕ್ಕೆ ಬರುತ್ತದೆ. ದೇಹವೇದೇವಾಲಯವೆಂಬ ಮಾತು ಜನಪದರ ಮಾತಿನಲ್ಲಿ ಸುಂದರವಾಗಿ "ಈ ಕಾಯ ಶಿವಹರನ ಮಂದಾಸ" ಎಂದು ಅರಳಿದೆ. ಕರಸ್ಥಲದಲ್ಲಿ ಇಷ್ಟಲಿಂಗವನ್ನಿಟ್ಟು ಪೂಜೆಮಾಡಿ, ಧ್ಯಾನಮುದ್ರೆಯಲ್ಲಿ ಕುಳಿತು ಲಿಂಗನಿರೀಕ್ಷೆಯಲ್ಲಿ ತೊಡಗಿದ ಸಾಧಕನಿಗೆ ಕಂಡುದಾದರೂ ಏನು

ನಿರುಬಯಲ ನಾಕಂಡೆ ಅದರೊಳಗೆ ಅರಳೂವ
ಬೆಳಗಿ ಮನ ಬೆಳಗಿ ಹೊಳೆದ । ಶಿವಬೆಳಗ
ನಾಕಂಡೆ ಶರಣು ಶರಣು" ॥

ಬಯಲು ಬೆಳಗಿದುದನ್ನು ಕಾಣುವ ಎತ್ತರಕ್ಕೆ ಬೆಳೆದಿದ್ದಾನೆ ಸಾಧಕನಿಲ್ಲಿ, ಆ ಬಯಲು ಎಲ್ಲವನ್ನೂ ಒಳಗೊಂಡ ನಿರ್ಬಯಲು. ಸರ್ವಶೂನ್ಯ ನಿರಾಲಂಬ ಸ್ಥಿತಿ ಅಲ್ಲಿ ಕಾಣಬಹುದು, 'ಶಿವಬೆಳಗು' ಅದನ್ನು ಕಂಡ ನಂತರ 'ಶರಣು ಶರಣು', ಎಂಬುದೊಂದೇ ಶಬ್ದ ಮುಗ್ಧವಾಗುವಸ್ಥಿತಿ.

ಜಾನಪದ ಸಾಹಿತ್ಯದಲ್ಲಿ ವೀರಶೈವ ಧರ್ಮ ಅರಳಿರುವ ಬಗೆಯನ್ನು ಕಂಡಾಗ ಬೆರಗಾಗದಿರದು. ಗುರು, ಲಿಂಗ, ಜಂಗಮ, ವಿಭೂತಿ, ರುದ್ರಾಕ್ಷಿ, ಮಂತ್ರ ಪಾದೋ ದಕ, ಪ್ರಸಾದಗಳ ಪ್ರಸ್ತಾವ ಪ್ರಾಸಂಗಿಕವಾಗಿ ಬಂದಿರುವುದನ್ನು ಕಾಣಬಹುದು.

ನಂಜನಗೂಡು ಚೆಂದ ನಂದೀಕೋಲು ಚೆಂದ
ಲಿಂಗಕಟ್ಟುವರ ಎದೆಚೆಂದ । ಲೋಕದಲಿ
ವಿಭೂತಿಯಿಕ್ಕುವರ ಹಣೆ ಚೆಂದ ॥

ಲಿಂಗಾಧಾರಣೆಯಿಂದ ಕಾಣಬರುವ ಚೆಲವು, ವಿಭೂತಿಧರಿಸುವುದರಿಂದ ಗೋಚರಿಸುವ ಚೆಲುವು ಲೋಕಪ್ರಿಯವಾದುವು ಎನ್ನುತ್ತದೆ ಜಾನಪದ. "ಕೂಡಲ ಸಂಗನ ಶರಣರಿಗೆ ನೊಸಲವಿಭೂತಿಯೆ ಶೃಂಗಾರ" ಎಂಬ ಬಸವಣ್ಣನವರ ವಚನ ಜನಪದರಲ್ಲಿ ಅರಳಿದ ಬಗೆಗೆ ಇದೊಂದು ನಿದರ್ಶನ. ಪಾದೋದಕವನ್ನು ಕುರಿತ ಒಂದು ಮುಕ್ತಕವನ್ನು ಪರಿಶೀಲಿಸಬಹುದು.

ಪಾದ ತೀರ್ಥವ ಸಲಿಸಿ ಪಾವನವಾಯಿತು ಜನ್ಮ
ರೋಮ ರೋಮೆಲ್ಲ ರವಿಬಿನ್ನ । ಗುರುಗಳ
ವಾದದಲಿ ಕಂಡೆ ಪರಶಿವನ ॥

ವೀರಶೈವ ಧರ್ಮದಲ್ಲಿ ಪಾದೋದಕಕ್ಕೆ ತುಂಬುಗೌರವ, ಎಣೆಯಿಲ್ಲದ ಮಹತ್ವ ಪಾದೋದಕ ವಾದ ನಂತರ ಪ್ರಸಾದ.

ಲಿಂಗಕ್ಹೋಳಿಗೆ ಮಾಡಿ ಅಂಗೈಯೆ ನೊಂದವು
ಗಂಗಾಳ ಬೆಳಗಿ ಶಿರ ನೊಂದು । ಸಿರಿಗೆರೆಯ
ಲಿಂಗವೆ ಭಿನ್ನಕ್ಕೆ ದಯಮಾಡಿ ॥

ಗುರುವಿಗಾಗಿ. ಲಿಂಗಕ್ಕಾಗಿ ಹೋಳಿಗೆಯನ್ನು-ಪ್ರಸಾದವನ್ನು ಸಿದ್ಧಮಾಡಿ ತನು ಸವೆದಿದೆ, ಮನಕಾಗಿದೆ, ಎಂಬ ಈ ಹೃದಯ ಸ್ಪರ್ಶಿ ಚಿತ್ರ ಅದೆಂಥ ಚೇತೋಹಾರಿ !

ಎದ್ದು ನೆನದೇನೇ ಸಿದ್ಧಶಿವಭೋಗಿಯ
ರುದ್ರಾಕ್ಷಿಕಂತೆ ಒಡೆಯಾನೆ । ಬಸವೇಶ್ವರನ
ನಿದ್ರೆಗಣ್ಣೀಲಿ ನೆನದೇನ ॥

ಎಂಬುದಾಗಿ ರುದ್ರಾಕ್ಷಿ ಧಾರಣ ಮಾಡಿದ ಬಸವಣ್ಣನವರ ಪವಿತ್ರಮೂರ್ತಿಯನ್ನು ನಿದ್ದೆ-ಎಚ್ಚರಗಳಲ್ಲಿ ಸ್ಮರಿಸುವಲ್ಲಿ ಜನಪದರಿಗೆ ಆನಂದ ಕಾಣುತ್ತದೆ,

ಸಂಜೇಯ ಬೆಳದಿಂಗಳು ಚಂದಗುಣಂಗಳು
ಗಂಧದ ಶಿವ ಗುಂಪು ಸುತ್ತ ।ಸಿದ್ಧಲಿಂಗಸ್ವಾಮಿ
ಸಂಜೇಲಿ ಸಮಾಧಿ ನಡೆದಾರ ।



ಸಿದ್ಧಲಿಂಗ ಸ್ವಾಮಿಗಳ ಸಮಾಧಿಯ ಸುಂದರ ದೃಶ್ಯಇದಲ್ಲವೆ ?

ವೀರಶೈವ ಧರ್ಮ ಬಸವಾದಿ ಶರಣರಿಂದ ಪ್ರವರ್ಧಮಾನಕ್ಕೆ ಬಂದದು ಸರ್ವವೇದ್ಯ. ಅಂದಿನಿಂದ ಇಂದಿನವರೆಗೂ ಶರಣ ಧರ್ಮದ ಜ್ಯೋತಿಯನ್ನು ನಂದದ ಹಾಗೆ ಕಾಪಾಡಿಕೊಳ್ಳುತ್ತ ಬಂದ ಮಹಾಪುರುಷರು, ಶರಣ ಶ್ರೇಷ್ಠರು, ಶಿವಯೋಗಿ ಸಂಪನ್ನರು ನಾಡಿನುದ್ದಗಲದಲ್ಲಿ ಕಾಲದಲ್ಲಿ ಜನಿಸಿ, ಬೆಳಗಿ ಲಿಂಗದೊಳಗಾಗಿದ್ದಾರೆ. ಅಂಥವರ ಗದ್ದುಗೆಗಳು, ಮಠ ಮಾನ್ಯಗಳು ಇಂದೂ ಸೇವಾಮಣಿಹದಲ್ಲಿ ತೊಡಗಿವೆ. ಅವುಗಳ ಕಾರ್ಯ ಚಟುವಟಿಕೆಗಳನ್ನು ಕುರಿತಂತೆ ಜಾನಪದ ಸಾಹಿತ್ಯ ಮೂಡಿ ಬಂದಿದೆ. ಅದೇ ಒಂದು ಪ್ರತ್ಯೇಕ ಅಧ್ಯಯನಕ್ಕೆ ವಸ್ತುವಾಗುವವಷ್ಟು ಸಮೃದ್ಧವಾಗಿದೆ. ಮಲೆಯ ಮಹದೇಶ್ವರ, ಕೊಟ್ಟೂರ ಬಸವೇಶ್ವರ, ಎಡೆಯೂರ ಸಿದ್ಧಲಿಂಗೇಶ್ವರ- ನಾಯಕನಹಟ್ಟಿ ತಿಪ್ಪೇಸ್ವಾಮಿ ಮುಂತಾಗಿ ಕೆಲವು ಹೆಸರುಗಳನ್ನು ಇಲ್ಲಿ ಉದಾಹರಿಸಬಹುದು. ಹಾಗೆಯೇ ಕಲ್ಯಾಣದ ಶರಣರನ್ನು ಕುರಿತಂತೆ ಹಂತಿಯ ಹಾಡುಗಳ ಉತ್ತರ ಕರ್ನಾಟಕದಲ್ಲಿ ಬಹು ಜನ ಪ್ರಿಯವಾಗಿವೆ. ಡಾ॥ ಬಿ. ಎಸ್. ಗದಗಿಮಠರವರು " ಕನ್ನಡ ಜಾನಪದ ಗೀತೆಗಳು "- ಗ್ರಂಥದ ಕೊನೆಯಲ್ಲಿ ಅನುಬಂಧದಲ್ಲಿರುವ ಹಂತಿಯ ಹಾಡುಗಳನ್ನು ಇಲ್ಲಿ ಉದಾಹರಿಸ ಬಹುದು.

ವೀರಶೈವ ಧರ್ಮೀಯರಿಗೆ ಇಂದು ಬೇಕಾಗಿರುವುದು ಅಭಿಮಾನ ಅದನ್ನು ಜನಪದರಿಂದ ನಾವು ಕಲಿಯ ಬೇಕಾಗಿದೆ.

ಕರುಣ ಬಂದರೆ ಕಾಯೋ ಮರಣ ಬಂದರೆ ಒಯ್ಯೋ
ಕರುಣಿ ಕಲ್ಯಾಣದ ಬಸವಣ್ಣ । ಕೂಡಲ ಸಂಗ
ಕಡೆತನಕ ಕಾಯೋ ಅಭಿಮಾನ ॥

ಎಂಬ ಆ ಅಭಿಮಾನಧನರಾಗಿ ಆಧುನಿಕ ಜಗತ್ತಿನಲ್ಲಿ ಜೀವಿಸಬೇಕಾಗಿದೆ. ವೀರಶೈವ ಧರ್ಮಕ್ಕೆ ಬಸವಣ್ಣನಂಥ ಮಹಾನುಭಾವನಿದ್ದಾನೆ ಎಂಬ ಅಭಿಮಾನ ಬೇಕಾಗಿದೆ. ಇಂದಿನ ವೈಜ್ಞಾನಿಕ, ವೈಚಾರಿಕ ಜಗತ್ತು ಬಸವಣ್ಣನನ್ನು, ಬಸವಣ್ಣನವರ ತತ್ವಗಳನ್ನು ಅರ್ಥಮಾಡಿಕೊಳ್ಳುವ ಪ್ರಯತ್ನದಲ್ಲಿ ತೊಡಗಿದೆ ದೇಶ ವಿದೇಶಗಳಲ್ಲಿ ಹಲವುಹನ್ನೊಂದು ಭಾಷೆಗಳಲ್ಲಿ ಈ ತತ್ವಗಳಿಂದು ಪ್ರಸಾರಗೊಳ್ಳುತ್ತಿವೆ. ಅದಕ್ಕೆ ಬದುಕನ್ನು ಮೀಸಲಿಟ್ಟು ದುಡಿಯುತ್ತಿರುವ ವಿದ್ವಾಂಸ ಬಂಧುಗಳಿದ್ದಾರೆ. ಅಂಥ ಸಂದರ್ಭದಲ್ಲಿ ಮಹಾನುಭಾವರು ಪ್ರತಿಪಾದಿಸಿದ. ಸುಧಾರಿಸಿದ ಧರ್ಮ ಜನಪದರ ಮೇಲೆ ಉಂಟುಮಾಡಿದ ಪರಿಣಾಮದ ರಸಚಿತ್ರವನ್ನೂ ಮಾಡಿಕೊಡುವ ಅಗತ್ಯವಿದೆ.

ಮಲ್ಲಿಗೆ ಇದ್ದಾಗ ಮುಳ್ಳೇಕೆ ಮುಡಿಯುವೆ
ಕಲ್ಯಾಣ ದೊಳಗೆ ಬಸವಣ್ಣ ! ನಿರುವಾಗ
ಕಲ್ಲಿಗೇಕೆ ಕೈಯ ಮುಗಿಯುವೆ ॥

ಜನಪದರಿಗೆ ಬಸವಣ್ಣ ಅರ್ಥವಾಗಿದ್ದಾನೆ. ಅವನು ನಡೆದ ಧರ್ಮಲಿಂಗವಂತ ಧರ್ಮವಾಗಿದೆ ವೀರಶೈವ ಧರ್ಮ ಅರ್ಥವಾಗಬೇಕಾದರೆ ಬಸವಣ್ಣನವರ ಅರ್ಥಮಾಡಿಕೊಳ್ಳಬೇಕು. ಬಸವಣ್ಣನವರು ಅರ್ಥವಾದರೆ ವೀರಶೈವಧರ್ಮ ಅರ್ಥವಾಯಿತೆಂದೇ ತಿಳಿಯಬಹುದು. ವೀರಶೈವ ಧರ್ಮದ ಸ್ವರೂಪವೆಲ್ಲ ಈ ಮುಕ್ತಕದಲ್ಲಿ ಹೇಗೆ ತೆರಕೊಂಡಿದೆ–

ಆಚಾರಕ್ಕರಸಾಗು ನೀತಿಗೆ ಪ್ರಭುವಾಗು
ಮಾತಿನಲಿ ಚೂಡಾಮಣಿಯಾಗು । ಕಂದಮ್ಮ
ಜ್ಯೋತಿಯೆ ಆಗು ಜಗಕೆಲ್ಲ ॥

ಆಚಾರ–ವಿಚಾರಗಳ ಕ್ರಿಯಾಜ್ಞಾನಗಳ ಸಾಮರಸ್ಯವನ್ನು ಬೋಧಿಸಿದ್ದು ವೀರಶೈವ. ಮುತ್ತು ಮಾಣಿಕ್ಯವಾಗಿ, ಜ್ಯೋತಿಯಾಗುವಂತೆ ಬೆಳಗಿದ್ದು, ಜಾನಪದ ಸಾಹಿತ್ಯದಲ್ಲಿ ವೀರಶೈವ ಧರ್ಮ ತೆನೆತೆನೆಯಾಗಿ ಕೆನೆಗೊಂಡಿದೆ.

ಧರ್ಮದ ಸಾರ್ಥಕತೆ ಇರುವುದು ಗ್ರಂಥಗಳಲಲ್ಲ, ಜನಾಂಗದ ಜೀವನದಲ್ಲಿ. ಅದು ಅರಳಿದಾಗ, ಅವರ ಬದುಕನ್ನು ಕೈಹಿಡಿದು ನಡೆಸಿದಾಗ, ಅವರ ಬದುಕಿಗೆ ನೆಮ್ಮದಿಯ ನೆಲೆಯನ್ನು ತಂದು ಕೊಟ್ಟಾಗ, ಆ ನೆಮ್ಮದಿ, ತೃಪ್ತಿ. ಅವರ ಸವಿ ಸೊಲ್ಲುಗಳಲ್ಲಿ ದಳದಳವಾಗಿ ಅರಳಿ ಗಂಧ–ಪರಿಮಳವನ್ನು ಸೂಸಿದಾಗ, ವೀರಶೈವ ಧರ್ಮ ಕಾಲ ಮತ್ತು ದೇಶಗಳ ಬದುಕಿನಲ್ಲಿ ಜೀವಂತ ಧರ್ಮವಾಗಿ ಉಳಿದು ಬಂದಿರುವುದಕ್ಕೆ ಜಾನಪದ ಸಾಹಿತ್ಯವೇ ಜ್ವಲಂತ ಉದಾಹರಣೆ. ಕೊನೆಯದಾಗಿ

ಅರದಿರು ಆರದಿರು ಆರದಿರು ಹಣತೆ
ಆರದಿರು ಓ ವಿಶ್ವ ವೀರಶೈವದ ಬೆಳಕೆ ॥

ಎಂಬ ಕವಿವಾಣಿಯನ್ನು ನೆನೆದು ವೀರಶೈವ– ಜಾನಪದಗಳ ಅಧ್ಯಯನ ಇನ್ನೂ ಶಾಸ್ತ್ರೀಯವಾಗಿ ನಡೆಯಬೇಕಾದ ಅತೀವ ಅಗತ್ಯವಿದೆ ಎಂಬುದನ್ನು ವಿನಂತಿಸಿ ಕೊಳ್ಳುವ ಒಂದು ನಮ್ರ ಪ್ರಯತ್ನ ಈ ಲೇಖನ.





ಕೃಷಿ ವಿಭಾಗ :-

# ಕೃಷಿ ಬೆಳವಣಿಗೆಯಲ್ಲಿ ಗೊಬ್ಬರಗಳ ಪಾತ್ರ

ಡಿ. ವೆಂಕಟರಾವ್, ಎಂ.ಎ, ಅರ್ಥಶಾಸ್ತ್ರ ರೀಡರ್, ಸರ್ಕಾರಿ ಕಲಾ ಕಾಲೇಜು, ಹಾಸನ.



ನಮಗೂ ಭೂಮಿಗೂ ಇರುವ ನಂಟು ಇಂದು ನಿನ್ನೆಯದಲ್ಲ. ಸೃಷ್ಟಿಯ ಆದಿಯಿಂದಲೇ ಈ ಸಂಬಂಧ ಬೆಳೆದುಕೊಂಡು, ಉಳಿದು ಬಂದಿದೆ, ಅನಾದಿಕಾಲ ದಿಂದಲೂ ಮಾನವ ಭೂಮಿಯ ಸತ್ವವನ್ನು ಹೀರಿಕೊಂಡು ತನ್ನ ಬದುಕನ್ನು ರಕ್ಷಿಸಿ ಕೊಳ್ಳುತ್ತ ಬಂದಿದ್ದಾನೆ. ಅವನ ದೇಹವನ್ನು ಆವರಿಸಿರುವ ಚರ್ಮ, ದೇಹಕ್ಕೆ ಆಧಾರವಾಗಿರುವ ಎಲುಬಿನ ಹಂದರ, ಕೇಶರಾಶಿ ಪ್ರತಿಯೊಂದೂ, ಭೂಮಿಯ ತಿರುಳಿನಿಂದಾಗಿರುವ ಪದಾರ್ಥಗಳು. ನಮಗೆ ಬೇಕಾದ್ದೆಲ್ಲಾ ಪ್ರತ್ಯಕ್ಷವಾಗಿ ದೊರೆಯುವುದು ಭೂಮಿಯಿಂದ. ಮಾನವ ಭೂಮಿಯನ್ನು ಮರೆಯುವಂತೆಯೇ ಇಲ್ಲ. ಅದು ನಮ್ಮ ಪಾಲಿಗೆ ನಿರ್ಜೀವ ವಸ್ತುವಲ್ಲ. ನಮ್ಮೆಲ್ಲರನ್ನು ತನ್ನದೆಯ ಸತ್ವದಿಂದ ಪೋಷಿಸುತ್ತಿರುವ ಭೂಮಾತೆ, ಧರಿತ್ರೀಮಾತೆ. ಆಕೆಯನ್ನು ದುರ್ಲಕ್ಷಿಸಿದಲ್ಲಿ ವಿಶ್ವದಲ್ಲಿ ಅಸ್ತಿತ್ವವೇ ಉಳಿಯಲಾರದು, ಆದಕಾರಣ, ನಮ್ಮೆಲ್ಲರ ಬಾಳಿಗೆ ಬೆಳಕಾಗಿರುವ ಭೂಮಿಯನ್ನು ಉತ್ತಮ ರೀತಯಿಂದ ಉಪಯೋಗಿಸಿಕೊಳ್ಳಬೇಕು. ಆಗಲೇ ನಾವು ಉತ್ತಮರೀತಿಯಿಂದ ಬಾಳಿ ಬದುಕಲು ಸಾಧ್ಯ. ಈ ದೃಷ್ಟಿಯಿಂದ ಭೂಮಿಯು ಎಂದೆಂದಿಗೊ ಬಡವಾಗದಂತೆ ನೋಡಿಕೊಳ್ಳಬೇಕು. ಅಂದರೆ ಭೂಮಿಯ ಫಲವತ್ತತೆಯನ್ನು ರಕ್ಷಿಸಬೇಕು.

ಮಣ್ಣಿನಲ್ಲಿರುವ ಬೆಳೆಗಳನ್ನು ಬೆಳೆಯಿಸುವ ಶಕ್ತಿಯೇ ಭೂಸತ್ವ. ಭೂಮಿಯ ಸತ್ವಕ್ಕೂ ಒಂದು ಮಿತಿ ಇದೆ. ಪ್ರತಿವರ್ಷವೂ ಭೂಮಿಯಲ್ಲಿ ಬೆಳೆ ಬೆಳೆದಾಗ, ಈ ಬೆಳೆಗಳು ಅದರಲ್ಲಿನ ಸತ್ವವನ್ನು ಹೀರಿಕೊಂಡು ಬೆಳೆಯುತ್ತವೆ. ಹೆಚ್ಚಿನ ಬಳಕೆಯಿಂದ ಭೂಸತ್ವ ಕಡಿಮೆಯಾಗುವುದು ಸಹಜ. ಆದ್ದರಿಂದಲೇ ಭೂಸತ್ವವನ್ನು ಬ್ಯಾಂಕಿನಲ್ಲಿಯ ಠೇವಣಿ ಇದ್ದಂತೆ ಎಂದು ಹೇಳಲಾಗುತ್ತದೆ. ನಿರಂತರವಾಗಿ ತೆಗೆಯುತ್ತಾ ಹೋದಲ್ಲಿ ಠೇವಣಿಯಂತೆಯೇ ಭೂಸತ್ವವೂ ಸತ್ವಹೀನವಾಗುವುದರಲ್ಲಿ ಆಚ್ಚರಿಯೇನಿಲ್ಲ, ಫಲವತ್ತತೆ ಕಡಿಮೆಯಾದಲ್ಲಿ ಫಸಲೂ ಕಡಿಮೆ. ಈ ಕಾರಣ-

ದಿಂದಾಗಿಯೇ ಹಿಂದೆ ನಮ್ಮ ತಾತ ಮುತ್ತಾತಂದಿರು ಬೆಳೆಯುತ್ತಿದ್ದಷ್ಟು ಬೆಳೆಯನ್ನು
ಇಂದು ಅನೇಕ ಕಡೆಗಳಲ್ಲಿ ಬೆಳೆಯಲಾಗುತ್ತಿಲ್ಲ. ಕೊರತೆಯಾದ ಸತ್ವವನ್ನು
ಭೂಮಿಗೆ ಮರಳಿ ಪೂರೈಸಲು ಇರುವ ಏಕೈಕ ಮಾರ್ಗ ಗೊಬ್ಬರಗಳನ್ನು ಬಳಸುವುದು.
ಇದರಿಂದ ಬೆಳೆಗಳ ದಷ್ಟ ಪುಷ್ಟ ಬೆಳವಣಿಗೆ ಸಾಧ್ಯ. ಭೂಮಿಯ ಸತ್ವವನ್ನು
ಕಾಯ್ದಿಡಲು ಗೊಬ್ಬರದ ಬಳಕೆ ದಿವ್ಯಷದ, ಇದರಿಂದ ಬೇರುಗಳು ಭೂಮಿಯ
ಒಳಗೆ ಸೇರಿ ಸಸ್ಯಗಳು ಸರಿಯಾಗಿ ಬೆಳೆಯಲು ಅನುಕೂಲವಾಗುತ್ತದೆ. ತಮಿಳು
ಗಾದೆಯಂತೆ ಮೇವಿಲ್ಲದೆ ಹಸುವಿಲ್ಲ, ಹಸುವಿಲ್ಲದೆ ಗೊಬ್ಬರವಿಲ್ಲ, ಗೊಬ್ಬರವಿಲ್ಲದೆ
ಬೆಳೆಯಿಲ್ಲ.

ಪ್ರಾಣಿವರ್ಗಕ್ಕೆ ಬೇಕಾಗುವಂತೆಯೇ ಸಸ್ಯವರ್ಗಕ್ಕೂ ಪೋಷಕಾಂಶಗಳು
ಆವಶ್ಯಕ. ಪೋಷಕಾಂಶಗಳಿಲ್ಲದೆ ಬೆಳೆ ಬೆಳೆಯಲಾರದು. ಪೋಷಕಾಂಶಗಳನ್ನು
ಬೇರುಗಳ ಮೂಲಕ ಹೊಂದಬೇಕಾಗಿರುವುದರಿಂದ ಸಾಕಾದಷ್ಟು ಸಸ್ಯಹಾರಗಳು
ಭೂಮಿಯಲ್ಲಿದ್ದರೆ ಮಾತ್ರ ಸಸ್ಯಗಳು ಚೆನ್ನಾಗಿ ಬೆಳೆಯುತ್ತವೆ, ಈ ಪದಾರ್ಥಗಳು
ಕಡಿಮೆಯಾಗಿರುವ ಭೂಮಿಯಲ್ಲಿ ಬೆಳೆ ಹುಲುಸಾಗಿ ಬರುವುದಿಲ್ಲ. ಸಸ್ಯ ಬೆಳೆ-
ಯಬೇಕಾದರೆ ಇಂಗಾಲ, ಜಲಜನಕ, ಆಮ್ಲಜನಕ, ಸಾರಜನಕ, ರಂಜಕ,
ಪೊಟಾಸಿಯಂ, ಕ್ಯಾಲ್ಸಿಯಂ, ಮೆಗ್ನೀಷಿಯಂ, ಗಂಧಕ, ಕಬ್ಬಿಣ, ಮ್ಯಾಂಗನೀಸ್,
ತಾಮ್ರ, ಸತು, ಕ್ಲೋರಿನ್, ಇವೆಲ್ಲವೂ ಸಸ್ಯಪೋಷಕಗಳು. ಸಸ್ಯಗಳ ಉತ್ತಮ
ಬೆಳವಣಿಗೆಗೆ ಈ ಮೂಲ ವಸ್ತುಗಳಲ್ಲಿ ಕೆಲವೊಂದು ಮಗ್ಗಿನಿಂದಲೂ, ಕೆಲವನ್ನು
ನೀರು ಗಾಳಿಯಿಂದಲೂ ಸಸ್ಯಗಳು ಪಡೆಯುತ್ತವೆ ಇವುಗಳ ಪೈಕಿ ಹೆಚ್ಚಿನ ವಸ್ತು-
ಗಳಿಗೆ ಮಣ್ಣೇ ಆಧಾರ. ಮಣ್ಣಿನಿಂದ ಸಸ್ಯಗಳಿಗೆ ಇವುಗಳ ಒದಗುವಿಕೆ, ಭೂಫ-
ಲವತ್ತು, ಎನ್ನುತ್ತಾರೆ. ಸಸ್ಯಗಳು ಮಣ್ಣಿನಲ್ಲಿ ದೊರೆಯುವ ಪದಾರ್ಥಗಳನ್ನು ದ್ರವ-
ರೂಪದಲ್ಲಿ ಬೇರುಗಳ ಮೂಲಕವೂ, ವಾಯುವಿನಲ್ಲಿ ದೊರೆಯುವ ಇಂಗಾಲಾಮ್ಲವನ್ನು-
ಸೂರ್ಯಕಿರಣಗಳ ಸಹಾಯದಿಂದ ಎಲೆಗಳ ಮೂಲಕವೂ ಸಂಗ್ರಹಿಸುತ್ತವೆ. ಇಂಗಾ-
ಲಾಮ್ಲದ ಹೊರತು ಉಳಿದ ಎಲ್ಲಾ ಪದಾರ್ಥಗಳೂ ಭೂಮಿಯಿಂದ ದ್ರವರೂಪದಲ್ಲೇ
ಸಸ್ಯಗಳನ್ನು ಸೇರಬೇಕಾಗಿರುವುದರಿಂದ ಭೂಮಿಯಲ್ಲಿ ತಕ್ಕಷ್ಟು ಜಲಾಂಶವಿದ್ದರೇನೇ
ಸಸ್ಯಗಳು ಸರಿಯಾಗಿ ಬೆಳೆಯಲು ಸಾಧ್ಯ. ಆದರೆ ಹೀಗೆ ಸ್ವಾಭಾವಿಕವಾಗಿ ಮಣ್ಣು
ವಾಯು, ಮತ್ತು ನೀರಿನಿಂದ ಪಡೆದ ಸಸ್ಯಾಹಾರ ಪದಾರ್ಥಗಳು ಸಾಮಾನ್ಯವಾಗಿ
ಸಸ್ಯಗಳ ಬೆಳವಣಿಗೆಗೆ ಸಾಕಾಗುವುದಿಲ್ಲ. ಆದ್ದರಿಂದ ಸಸ್ಯಗಳು ಚೆನ್ನಾಗಿ ಬೆಳೆಯ
ಬೇಕಾದರೆ ಅವುಗಳಿಗೆ ಬೇಕಾದಷ್ಟು ಆಹಾರವನ್ನು ನಾವು ಮಣ್ಣಿಗೆ ಸೇರಿಸಬೇಕು.
ಪ್ರತಿವರ್ಷವೂ ಭೂಮಿಯಲ್ಲಿ ಸಸ್ಯಗಳನ್ನು ಬೆಳೆಸುವುದರಿಂದ ಕ್ರಮೇಣ ಅದರಲ್ಲಿ-
ರುವ ಆಹಾರಾಂಶಗಳು ಕಡಿಮೆಯಾಗುತ್ತಾ ಹೋಗುತ್ತವೆ. ಏಕೆಂದರೆ ಸಸ್ಯಗಳಿಗೆ
ಅಧಿಕ ಪ್ರಮಾಣದಲ್ಲಿ ಆಹಾರ ಪದಾರ್ಥಗಳು ಬೇಕಾಗುತ್ತವೆ. ಆದರೆ ಮಣ್ಣಿನಲ್ಲಿ



ದೊರೆಯುವ ಸಸ್ಯಾಹಾರಗಳು ಮಿತ ಪ್ರಮಾಣದಲ್ಲಿರುತ್ತವೆ. ಆದ್ದರಿಂದ ಭೂಮಿಗೆ
ಆಗಾಗ ಹೆಚ್ಚಾಗಿ ಸಸ್ಯಾಹಾರಗಳು ಸೇರಿಸುತ್ತಿರಬೇಕು. ಹೀಗೆ ನಾವು ಮಣ್ಣಿಗೆ
ಸೇರಿಸಬೇಕಾದ ಸಸ್ಯಾಹಾರ ಪದಾರ್ಥಗಳಿಂದ ಕೂಡಿದ ವಸ್ತುವಿಗೆ 'ಗೊಬ್ಬರ'
ಎಂದು ಹೆಸರು. ಸಸ್ಯಗಳು ಭೂಮಿಯಲ್ಲಿ ಸತ್ವವನ್ನು ಹೀರಿಕೊಂಡು ಬೆಳೆಯು
ತ್ತವೆ. ಈ ಕೊರತೆಯಿಂದ ಸತ್ವವನ್ನು ಮರಳಿ ಭೂಮಿಗೆ ಪೂರೈಸುವುದೇ ಗೊಬ್ಬರ
ಸತ್ವಯುತ ಗೊಬ್ಬರಗಳ ಬಳಕೆಯಿಂದ ಭೂಮಿ ಎಂದೆಂಗೂ ಬಡವಾಗಲಾರದು.
ಗೊಬ್ಬರ ಎಂದರೆ ಸಸ್ಯಕ್ಕೆ ಅಗತ್ಯವಾಗಿರುವ ಪೋಷಕಾಂಶಗಳನ್ನು ಪೂರೈಸುವ
ಉದ್ದೇಶದಿಂದ ಮಣ್ಣಿನ ಭೌತಗುಣವನ್ನು ಉತ್ತಮಗೊಳಿಸಲು ಉಪಯೋಗಿಸುವ
ಒಂದು ಉತ್ಕೃಷ್ಟ ಪದಾರ್ಥ. ಮಣ್ಣಿನ ಅಂತಸ್ಸತ್ವವು ಅದು ಒಳಗೊಂಡ ಪೋಷ
ಕಾಂಶಗಳನ್ನವಲಂಬಿಸಿದೆ. ಗೊಬ್ಬರ ಈ ಪೋಷಕಾಂಶಗಳ ರತ್ನಗರ್ಭ. ಒಂದು
ಬಾರಿ ಗೊಬ್ಬರ ಹಾಕಿ ನಾಲ್ಕು ಬೆಳೆ ತೆಗೆದರೆ ನಂತರ ಅವುಗಳ ಅಂಶ ಮಣ್ಣಿನಲ್ಲಿ
ಏನೂ ಉಳಿದಿರುವುದಿಲ್ಲ. ಮಣ್ಣಿನಲ್ಲಿ ಸಾಕಷ್ಟು ಪ್ರಮಾಣದಲ್ಲಿ ಈ ಪೋಷಕಗಳು
ಇಲ್ಲದಾಗ ಗೊಬ್ಬರಗಳನ್ನು ಬಳಸಬೇಕಾಗುತ್ತದೆ. ಇದರಿಂದ ಭೂಸತ್ವವನ್ನು ಕಾಯ್ದಿ
ರಿಸುವುದೇ ಅಲ್ಲದೆ ಬೆಳೆಗಳ ಪೋಷಕಾಂಶಗಳ ಪೂರೈಕೆಯೂ ಆಗಿ, ಭೂಮಿಯ
ಭೌತಿಕ ರಾಸಾಯನಿಕ ಹಾಗೂ ಜೈವಿಕಸ್ಥಿತಿಗಳು ಸರಿಯಾಗಿರಲು ಬೇಕಾದ ವಸ್ತು
ಗಳ ಪೂರೈಕೆಯೂ ಆಗುತ್ತದೆ. ಭೂಮಿಯು ನೀರನ್ನು ಹೀರಿಕೊಳ್ಳುವ ಹಾಗೂ
ಹಿಡಿದಿಟ್ಟುಕೊಳ್ಳುವ ಗುಣ ವರ್ಧಿಸುತ್ತದೆ. ಮಣ್ಣಿನ ಸ್ವರೂಪ, ರಚನೆಗಳೂ
ಸುಧಾರಿಸುತ್ತದೆ.

ಗೊಬ್ಬರದ ಬಳಕೆ ಮೊಟ್ಟಮೊದಲಿಗೆ ಹೇಗೆ ಪ್ರಾರಂಭವಾಯಿತು ಎಂಬುದು
ಖಚಿತವಾಗಿ ತಿಳಿಯದು. ಪ್ರಾರಂಭದಲ್ಲಿ ಮಾನವ ನದಿಯ ಬಯಲುಗಳಲ್ಲಿ ನಿಂತು
ಕೃಷಿ ಕೈಗೊಳ್ಳುತ್ತಿದ್ದುದರಿಂದ ಅಲ್ಲಿ ಭೂಮಿ ಹೆಚ್ಚು ಫಲವತ್ತಾಗಿರುತ್ತಿತ್ತು ಇದ
ರಿಂದಾಗಿ ಆ ಗೊಬ್ಬರಗಳ ಅಗತ್ಯ ಕಂಡುಬರಲಿಲ್ಲ. ಮಾನವ ಭೂಮಿಯನ್ನು ಉತ್ತು,
ಬೀಜಗಳನ್ನು ಬಿತ್ತಿ, ಬೆಳೆಯನ್ನು ಬೆಳೆಯಲು ಪ್ರಾರಂಭಮಾಡಿದ ಎಷ್ಟೋವರ್ಷ
ಗಳ ನಂತರ ಗೊಬ್ಬರಗಳ ಉಪಯೋಗದ ಬಗ್ಗೆ ತಿಳಿದಿರಬಹುದು ಎನ್ನಲಾಗಿದೆ. ಬೀಜ
ಗಳನ್ನು ಬಿತ್ತುವಾಗ ಅವುಗಳಲ್ಲಿ ಕೆಲವು ದನಗಳು ಹಾಕಿದ ಸಗಣಿಯ ಮೇಲೆ
ಬಿದ್ದಿರಬಹುದು. ಬೆಳೆ ಬಂದಾಗ ಸಗಣಿಯ ಮೇಲೆ ಬೆಳೆದು ನಿಂತಿದ್ದ ಬೆಳೆ ಉಳಿದ
ಬೆಳೆಯನ್ನು ಮೀರಿಸಿರಬಹುದು, ಇದೇ ಭೂಮಿಗೆ ಗೊಬ್ಬರ ಕೊಡಬೇಕೆಂಬ ಕಲ್ಪ
ನೆಗೆ ನಾಂದಿ ಹಾಕಿರಬಹುದು. ಅಂದಿನಿಂದಲೇ ದನಗಳ ಕೊಟ್ಟಿಗೆಯಿಂದ ಸಗಣಿ
ಯನ್ನು ಒಂದೆಡೆ ಸೇರಿಸಿಟ್ಟು ವರ್ಷಕ್ಕೊಮ್ಮೆ ಹೊಲಗಳಿಗೆ ಹಾಕುವ ಪದ್ಧತಿ ಪ್ರಾರಂಭ
ವಾಯಿತು. ಈ ರೀತಿ ಪ್ರಾರಂಭವಾದ ಗೊಬ್ಬರದ ಕಲ್ಪನೆ ಇಂದು ವಿಶಾಲವಾದ
ವ್ಯಾಪ್ತಿಯನ್ನೊಳಗೊಂಡಿದೆ. ಗೊಬ್ಬರ ರೈತರ ಬಾಳಿನ ಸಂಜೀವಿನಿಯೆನಿಸಿದೆ. ಬೆಳೆಯುತ್ತಿರುವ

ಜನಸಂಖ್ಯೆಯ ಸಮಸ್ಯೆಗೆ, ಮಿತವಾದ ನೆಲದಲ್ಲಿ ಅಧಿಕ ಇಳುವರಿ ತೆಗೆಯುವುದೊಂದೇ ಪರಿಹಾರ. ಹಸಿರು ಕ್ರಾಂತಿಯಲ್ಲಿ ನಿರ್ಧಾರಕ ಪಾತ್ರ ವಹಿಸಿರುವ ಗೊಬ್ಬರ ಇದಕ್ಕೆ ಉತ್ತಮ ಸಾಧನ ಎನಿಸಿದೆ. ಗೊಬ್ಬರಗಳನ್ನು ನೈಸರ್ಗಿಕ ಗೊಬ್ಬರಗಳು ಹಾಗೂ ಕೃತಕ ಗೊಬ್ಬರಗಳು ಎಂಬುದಾಗಿ ವಿಂಗಡಿಸಬಹುದು. ನೈಸರ್ಗಿಕ ಗೊಬ್ಬರಗಳು ಪ್ರಾಣಿ ಸಸ್ಯ ಸಂಬಂಧವಾದವುಗಳಾಗಿದ್ದು, ಹೆಚ್ಚಾಗಿ ಪ್ರಾಣಿಮಲ, ಶರೀರದ ಭಾಗ ಹಾಗೂ ಸಸ್ಯಾಂಶಗಳಿಂದ ಕೂಡಿರುತ್ತದೆ. ಈ ಭಾಗಕ್ಕೆ ಸೇರಿದವು ಕೊಟ್ಟಿಗೆ ಗೊಬ್ಬರ ಹಸುರೆಲೆಯ ಗೊಬ್ಬರ ಮತ್ತು ನವೀನ ಪದ್ಧತಿಯಲ್ಲಿ ಮಾಡುವ ಕಾಂಪೋಸ್ಟ್ ಗೊಬ್ಬರ, ಈ ಬಗೆಯ ಗೊಬ್ಬರವನ್ನು ರೈತರು ಸ್ವತಃ ತಯಾರಿಸಬಲ್ಲರು, ಕೃತಕ ಗೊಬ್ಬರಗಳು ಲವಣರೂಪದಲ್ಲಿದ್ದು. ಇವುಗಳನ್ನು ಬೃಹತ್ ಪ್ರಮಾಣದಲ್ಲಿ ಕಾರ್ಖಾನೆಗಳಲ್ಲಿ ಸಿದ್ಧಪಡಿಸಲಾಗುತ್ತದೆ. ಈ ಭಾಗಕ್ಕೆ ಸೇರಿದವು ಅಮೋನಿಯಂ ಸಲ್ಫೇಟ್, ಸೂಫರ್ ಫಾಸ್ಫೇಟ್, ಪೊಟಾಸಿಯಂ ಸಲ್ಫೇಟ್, ಅಮೋಫಾಸ್ ಮುಂತಾದ ರಸಾಯನಿಕ ಗೊಬ್ಬರಗಳು. ಇವುಗಳನ್ನು ಸೀಮೆ ಗೊಬ್ಬರಗಳೆಂದೂ ಕರೆಯುತ್ತಾರೆ.

(ಮುಂದುವರಿಯುತ್ತದೆ)







## ಕ್ಷಯಾಕ್ಷಯಾಂಬರ


ಪ್ರೊ. ವಸಂತಕುಷ್ಟಗಿ, ಪ್ರಿನ್ಸಿಪಾಲರು
ಎಂ.ಎಸ್.ಐ, ಡಿಗ್ರಿ ಕಾಲೇಜು, ಕಲಬುರಗಿ-585102


ಚಿಂತೆಯೋ ಚಿಂತನೆಯೋ
ಧಗಧಗಿಸಿ ಚಿತೆಯಾದಾಗ
ಕಣ್ಣೆದುರಲ್ಲೆ,
ಪರಿಸರದ ಅರಳಿದಿಂಡಿಗೆಗೆ
ಬೆಂಕಿ ಹತ್ತಬೇಕೆ ?

ಅಂತರಾಳದ ನಿರಾಳ ಕಣ್ಣಿಗೆ
ಯಾವ ಭಂಗಿಗೆ ಯಾವಭಾವವೋ
ತಾಂಡವದ ಕಲ್ಲೋಲ ಮಾಲೆ
ಕಾಡಿಗೆಯಾಗಿ
ಮುತ್ತಬೇಕೆ-?

ಬುದ್ಧಿಕೋಟಿಯ ವಿದುಳು ಕಾವೇರಿದಾಗ
ಭಾವ ವಿಭಾವ ಸಂಚಾರಿಗಳೆಲ್ಲ
ಕ್ಷಿತಿಜದಾಚೆಗೂ ಮೈ ಚಾಚಿ
ಎಂಟು ಒಂಬತ್ತನ್ನೆಲ್ಲ ಒಂದಕ್ಕೆ ಬಾಚಿ
ಧೃತರಾಷ್ಟ್ರನ ಕಣ್ಣುಗಳಲ್ಲಿ
ಅನಿಷ್ಟ ಕ್ಷಯವಾಗಿ
ಶಿಷ್ಟ ಚಾತಕಕ್ಕೆ
ಅಕ್ಷಯ ಸ್ವಾತಿಯ ಹೊಳಪು
ಕಾಣಬೇಕೆ-?

ಕ್ಷಯಾಕ್ಷಯಗಳಲ್ಲಿ
ಹಾಲಾಹಲವು ಅಮೃತವಾದಾಗ
ಆತ್ಮ ಪರಮಾತ್ಮನಲ್ಲಿ
ಕ್ಷಯವಾದಾಗ
ಬೇರೆ ಅಕ್ಷಯಾಂಬರದ
ಸೊಲ್ಲೇಕೆ ?

# ಉತ್ತಮ ಉಪಾಧ್ಯಾಯ ಯಾರು ?

---ಅ. ಬ. ಚನ್ನಬಸಪ್ಪ
ರಿ॥ ಮುಖ್ಯೋಪಾಧ್ಯಾಯ, ಶಂಕರ ಮಠದ ರಸ್ತೆ, ಮೈಸೂರು-4

" ಉತ್ತಮ ಉಪಾಧ್ಯಾಯ ಯಾರು ? "

ನಾಡಿನಲ್ಲಿ ಅನೇಕ ಕಾಯಕಗಳುಂಟು, ಪ್ರತಿಯೊಬ್ಬರು ಅವರವರ ಕಾಯಕ
ದಲ್ಲಿ ನಿರತರಾಗಿರುವರು. ಕೆಲವರು ಗೊಣಗುಟ್ಟಿಕೊಂಡು, ಕೆಲವರು ಕೆಲಸ ಇನ್ನು
ಮುಗಿಯಲಿಲ್ಲವಲ್ಲ , ಎಂದು; ಮತ್ತೆ ಕೆಲವರು " ಏನಪ್ಪ, ಎಷ್ಟು ಬೇಗ ಮುಗಿದು
ಹೋಯಿತ್ತಲ! ಎಂದು ಹೇಳುವರು, ಈ ಗುಂಪಿನವರೇ ನೈಜ ವೃತ್ತಿಯವರು.

ವೃತ್ತಿ (ಕಾಯಕ) ಗಳಲ್ಲಿ ಉಪಾಯ ವೃತ್ತಿಯೇ ಸರ್ವ ಶ್ರೇಷ್ಠ ಪ್ರತಿಯೊ
ಬ್ಬರಿಗೂ ಜ್ಞಾನ ದೀವಿಗೆಯನ್ನು ಹೊತ್ತಿಸುವುದು ಭಾಗ್ಯಗಳಲ್ಲಿ ಆರೋಗ್ಯ ಭಾಗ್ಯ
ಶ್ರೇಷ್ಠ ಎಂಬುವುದರಲ್ಲಿ ಯಾವ ಅನುಮಾನವೂ ಇಲ್ಲ. ಇಂಥ ಭಾಗ್ಯವನ್ನು ಹೇಗೆ
ಸಂಪಾದಿಸಿಕೊಳ್ಳುವ ಮಾರ್ಗಗಳನ್ನು ತಿಳಿಸುವುದಲ್ಲದೆ, ತಾನು ಆ ಮಾರ್ಗಗಳನ್ನು
ಅನುಸರಿಸುವನ್ನು. ಈ ಎರಡು ಗುಣಗಳಿಗೆ ಕಿರೀಟಪ್ರಾಯವಾದ ಗುಣ! ತಾನು
ಅನುಸರಿಸುವುದು ಮಕ್ಕಳು ಗುಣವಂತರಾಗಿ ಬೆಳೆಯುವಂತೆ ಮಾರ್ಗದರ್ಶಕರಾಗಿ
ರುವರು, ಈ ಗುಣವಂತರೇ ರಾಷ್ಟ್ರದ ಸತ್ಪ್ರಜೆಗಳಾಗುವರು. ಗುಣಗಳು ಅವರನ್ನು
ರಾಷ್ಟ್ರಕ್ಕೆ ; ಕಾರ್ಖಾನೆಗಳು ಸಾಮಾನುಗಳನ್ನು ರಾಷ್ಟ್ರಕ್ಕೆ; ರೈತರು ಧವಸ ಧಾನ್ಯ
ರಾಷ್ಟ್ರಕ್ಕೆ ಒದಗಿಸುರು; ಮಾತಾಪಿತೃಗಳು ಮಕ್ಕಳನ್ನು ರಾಷ್ಟ್ರಕ್ಕೆ; ಆ ಮಕ್ಕಳನ್ನು
ರಾಷ್ಟ್ರದ, ಸತ್ಪ್ರಜೆಗಳನ್ನಾಗಿ ಉಪಾಧ್ಯಾಯ ಯಾರು ಮಾಡುವನು.

ಬೇರೆ ಇಲಾಖೆಯಲ್ಲಿ ಹುದ್ದೆಯ ದರ್ಪ, ಹೆಚ್ಚಿಗೆ ಸಂಬಳ' ಇದ್ದಾಗ್ಯೂ
ಅವುಗಳಿಗೆ ಆಸೆಪಡದೆ, ಉಪಾಧ್ಯಾಯ ವೃತ್ತಿಗೆ ಪ್ರವೇಶಿಸುವ ಆತನೇ ನೈಜವಾದ
ಉಪಾಧ್ಯಾಯ, ಹೀಗೆ ಆಗಲು ಹಿಂಬದಿಯಲ್ಲಿ ಕಾರಣಗಳು ಇಲ್ಲದೆ ಇಲ್ಲ ! ಪೂರ್ವ
ಜನ್ಮದ ವಾಸನೆ. ಆ ಜನ್ಮದಲ್ಲಿ ಆ ಆಸೆಯು ಪೂರ್ತಿಯಾಗಿ ಅನುಭವಿ
ಸುವುದಕ್ಕೆ ಮುಂಚೆಯೇ ಯಮನ, ಪಾಶಕ್ಕೆಸಿಕ್ಕಿಯಾಯಿತು. ಮಾತಾಪಿತೃ
ಗಳಲ್ಲಿ ಗುರುಗಳಾಗುವ ಲಕ್ಷಣಗಳಿದ್ದು, ಆ ವಾತಾವರಣದಲ್ಲಿ ಬಾಲಕತನದಲ್ಲಿ, ಬೆಳೆ
ಯುವಂತೆ ಅನುಕೂಲಿಸುವುದು. ಅಲ್ಲದೆ ಆ ಬಾಲಕ ವ್ಯವಹಾರದಲ್ಲಿ ವಿಚಾರಗಳನ್ನು



ತಿಳಿಯುತ್ತಾ, ಸಮಯದೊರೆತಾಗಲೆಲ್ಲ, ಹಸನ್ ಮುಖಿಯಾಗಿ ಇತರರಿಗೆ ಮನದಟ್ಟಾ
ಗುವಂತೆ ತಿಳಿಸುವುದು. ಇವೇ ಮೊದಲಾದುವು ಆತನನ್ನು ಆಮಾರ್ಗದೆಡೆಗೆ, ಸೆಳೆ
ಯುವುವು. ಆತನಕೂಡ ಲವಲವಿಕೆಯಿಂದ ಆವೃತ್ತಿಯನ್ನು ಅಂಗೀಕರಿಸುವನು. ಇದು
ಆತನಿಗೆ ತನ್ನ ವೃತ್ತಿ ಭವನದ ತಳಹದಿಯು;

ಆತನ ಮುಂದಿನ ಜೀವನ ರಂಗದ ಭಾಗವನ್ನು ನೋಡುವ !

1 ಆತನು ಶಾಂತಿಯ ಮನೋಧರ್ಮದ ಮೂರ್ತಿಯಾಗಿರಬೇಕು- ಕೋಪವರ್ಜಿ
ತನಾಗಿ, ಮಕ್ಕಳ ಪ್ರಶ್ನೆಗಳನ್ನು ಸ್ವಾಗತಿಸುತ್ತಿರಬೇಕು. ಅವರಿಗೆ ಮುಂಚಿತವಾಗಿ
ಸೂಚಿಸಿರಬೇಕು. ಸಂದೇಹ ಬಂದಾಗಲೆಲ್ಲ ಯಾವ ಸಂಕೋಚವಿಲ್ಲದೆ, ನಿರ್ಭೀತಿ
ಯಿಂದ ಮಧುರವಾದ ಕಂಠದಿಂದ, ವಿನಯದಿಂದ ಕೇಳಬಹುದೆಂದೂ' ಕೇಳುವ
ಪ್ರಶ್ನೆಯು ಆಗ ನಡೆಯುತ್ತಿರುವ ಭಾಗಕ್ಕೆ ಸಂಬಂಧಿಸಿರಬೇಕೆಂದೂ ತಿಳಿಸಬೇಕು !
ಉದಾ : ಉಪಾಧ್ಯಾಯರು, ಅಶೋಕ ಚಕ್ರವರ್ತಿಯ ಪಾಠಮಾಡುತ್ತಿರುವರು.
ಆಗ ಒಬ್ಬ ವಿಧ್ಯಾರ್ಥಿಯು, " ಸಾರ್ ! ನಮ್ಮ ಊರಿನ ಪಟೇಲರು ಏಕೆ ಓಟನಲ್ಲಿ
ಸೋತು ಹೋದರು ? ಎಂದು ಕೇಳುತ್ತಾನೆಂದು ಊಹಿಸೋಣ; ಆಗ ಉಪಾಧ್ಯಾ
ಯರು, ಆತನ ಮೇಲೆ ಕೋಪಿಸಿಕೊಳ್ಳದೆ, " ಅಪ್ಪಾ, ಮಗು ! ಆ ಓಟನ ಪಾಠ
ಬಂದಾಗ ನೋಡೋಣ; ಈ ಪಾಠಕ್ಕೆ ಅದುಸಲ್ಲಲಾರದು !'' ಎಂದು ಶಾಂತಿಯಿಂದ
ತಿಳಿಸಬೇಕು. ಹಾಗಲ್ಲದೆ, ಮೂರ್ಖ ! ಅವಿವೇಕಿ ! ಸುಮ್ಮನೆ ಕುಳಿತುಕೊ ! „ ಎಂದು
ಗದರಿಸಬಾರದು ! " ಕೋಪವೆಂಬುದು ಅನರ್ಥಸಾಧನ-ಕೋಪವೇ ಸಂಸಾರ ಬಂಧನ
ಕೋಪದಿಂದ ಉಹುತರದ ಸುಕೃತವು ಲಯಯೈವುದು ! „ ಅಂದಮೇಲೆ ಅದೆಂಥಹ
ಕೋಪ ಉಪಾಧ್ಯಾಯನಿಗೆ !

2 " ಆ ಜಾತಿ- ಈ ಜಾತಿ ಎನಬೇಡ; ಸ್ವಜಾತಿ-ವಿಜಾತಿ ಎನಬೇಡ; ವಿದ್ಯಾರ್ಥಿ
ವೃಂದವೆಲ್ಲವು-ಜನಾಂಗವೆಲ್ಲವು ದೇವಸೃಷ್ಟಿಸಿದ ಒಂದೇಜಾತಿ „ ಎಂದು ತಿಳಿದು ,
ಆದರ ವ್ರತ ಶೀಲನಾಗಬೇಕು. ತರಗತಿಯಲ್ಲಿ ಒಡವ ಒಲ್ಲದವ ; ಸಾಹೇಬರ
ಜವಾನನ ಮಕ್ಕಳೆಂದು ಗುಣಿಸಬಾರದು ಎಲ್ಲರಿಗೂ ಒಂದೇ ದೃಷ್ಟಿ-ಒಂದೇ ಮಮತೆ
ಒಂದೇ ಕಾನೂನನ್ನು ಅನುಸರಿಸಬೇಕು. ಆತನು ಧರ್ಮಕ್ಕೆ ಅಂಜುತ್ತಾನೆಯೇ
ಹೊರತು--ಹೊಗಳಿಕೆಗೆ ಮಾರುಹೋಗವುದಿಲ್ಲ

3 ಆತನು ಯಾವ ಬೋಧನೆಯಲ್ಲಿ ಆಸೆ ಅಶೋತ್ತರ ಹೊಂದಿರುವನೊ, ಆ
ಪಾಠವನ್ನು ಮಾತ್ರ ಭೋಧಿಸಬೇಕು. ಆತ ಆ ಭಾಗವನ್ನು ಸತತವಾಗಿ ಬೋಧಿಸು
ತ್ತಿರಬಹುದು. ಆದಾಗ್ಯೂ ಮುಂಚಿತವಾಗಿ, ಒಂದು ಸಾರಿ, ನೋಡಿಕೊಂಡು,
ಮುಖ್ಯ ಸಂಗತಿಗಳನ್ನು ತನ್ನ ನೋಟ್ಸನಲ್ಲಿ ಗುರುತಿಸಿಕೊಂಡು. ಶಾಲೆಗೆ ಹೋಗುವ

ಮಾರ್ಗದಲ್ಲಿಯೂ, ಅದೇ ಚಿಂತೆಯಲ್ಲಿದ್ದ- ಬಹುಶಃ ಬಾಲಕರು ಹಾಕಬಹು
ದಾದ ಪ್ರಶ್ನೆಗಳನ್ನು ಊಹಿಸುತ್ತಾ, ಅವುಗಳಿಗೆ ಸೂಕ್ತ ಉತ್ತರವನ್ನು ಮೆಲಕು
ಹಾಕುತ್ತಾ ಹೋಗುತ್ತಿರಬೇಕು.

ಕಾಲಕ್ಕೆ ಸರಿಯಾಗಿ ತರಗತಿಗೆ ಆಗಿನ ಸಲಕರಣೆಗಳೊಡನೆ ಪ್ರವೇಶಿಸಿ, ಅವರ
ಗುರುವಂದನೆಯನ್ನು ಸ್ವೀಕರಿಸಿ' ಪ್ರತಿಯಾಗಿ ಆಶೀರ್ವಾದ ವಚನ ಬೀರಬೇಕು.
ತನ್ನ ಪಂಡಿತತನವನ್ನು ಪ್ರದರ್ಶಿಸದೆ, ಅವರ ಅಂತಸ್ತಿಗಳಿಂದು, ನಿಧಾನವಾಗಿ
ಕೊನೆಯ ಹುಡುಗರಿಗೂ ಕೇಳಿಸುವಂತೆಯೂ ನೆರೆಹೊರೆ ತರಗತಿಯವರಿಗೆ ತನ್ನ
ಧ್ವನಿಯು ಅವರ ಕಾರ್ಯಕಲಾಪಗಳಿಗೆ ಅಡಚಣೆಯಾಗದಂತಿರಬೇಕು. ಭೋಧ
ನೆಯ ಮಧ್ಯದಲ್ಲಿ ಅನುಮಾನಸಂಭವಿಸಿದರೆ ಮಕ್ಕಳೆ! ತಾವು ಮನೆಯಲ್ಲಿ ಯೋಚಿಸಿ
ಕೊಂಡು ಬನ್ನಿ! ನಾನು ಕೂಡನೋಡಿಕೊಂಡು ಬರುತ್ತೇನೆ ಎಂದು ತಿಳಿಸಬೇಕೇ
ಹೊರತು, ತಪ್ಪು ಅಭಿಪ್ರಾಯ ತಿಳಿಸಬಾರದು.

4. ಪಟ್ಯೇತರ' ಇನ್‌ಡೋರ್-ಔಟ್‌ಡೋರ್ ಆಟಗಳಲ್ಲಿ ಮಕ್ಕಳೊಡನೆ
ಸಹಕರಿಸಬೇಕು. ಒಂದು ವೇಳೆ ಆ ಆಟ ಆಡಲು ಸಾಧ್ಯವಿಲ್ಲದಿದ್ದರೆ, ಪ್ರೇಕ್ಷಕರಂತೆ
ವ್ಯವಹರಿಸುತ್ತಾ, ಅವರಲ್ಲಿ ಶಿಸ್ತು ಭಂಗ ಬಂದಾಗ ಸೂಕ್ತ ತಿಳಿವಳಿಕೆಯಿಂದ
ತಿದ್ದುವುದು.

5 ಸಾಮಾನ್ಯ ಜನರಲ್ಲಿ ಕೆಲವರು ದುಷ್ಟಛಟಗಳಿಗೆ ಸಮಾಜದಲ್ಲಿ ಈಡಾಗಿರು
ವರು. ಉಪಾಧ್ಯಾಯನು ಇವುಗಳನ್ನು ಮನಸಾ-ವಾಚಾ-ಕಾಯಗಳಲ್ಲಿ ದೂರ
ಮಾಡಿ, ಮಕ್ಕಳಿಗೂ ಮಾತಾಪಿತೃಗಳಿಗೂ ಮಾದರಿಯಾಗಿಬಾಳಿ, ತೋರಿಸಬೇಕು.
ಇತರ ಇಲಾಖೆಯವರು ನೋಡಿ.ಮೆಚ್ಚಿ ನಾವೇಕೆ ಹೀಗಿರಬಾರದು ಎಂದು ಹೇಳು
ವಂತಿರಬೇಕು.

6 ಪರೀಕ್ಷೆಯಪ್ರಶ್ನೆಗಳನ್ನು ಯಾವ ಅಶೋತ್ತರಗಳಿಗೆ ಈಡಾಗದೆ, ಹೊರಗೆಡ
ಬಾರದು. ತನ್ನ ಮನೆಯ ಮಕ್ಕಳಿಗೂ ಸೂಚಿಸಬಾರದು. ತನ್ನ ಮನೆಯ ಮಕ್ಕ
ಳಿಗೊ ಸೂಚಿಸಬಾರದು. ಅಂಕಗಳನ್ನು ಕೊಡುವಾಗ ನನ್ನವ-ನನ್ನವನಲ್ಲ ! ಆ
ಜಾತಿ ಈ ಜಾತಿ : ನನ್ನ ದ್ವೇಶಿಸುವ...... ಮೊದಲಾದವರ ಮನೆಯವರು ಎಂದು
ಅಲೋಚಿಸದೆ, ಧರ್ಮದ ಅಳತೆ ಕೋಡಿಲ್ಲಿದು ವ್ಯವಹರಿಸಬೇಕು!

7 ಉಪಾಧ್ಯಾಯನು ಆಯಾಪಾಠದ ಸಂಬಂಧಕ್ಕೆ ಹಿಡಿಸಬಹುದಾದ ತನ್ನ
ಜೀವನದ ಚಿತ್ರ, ಇಲ್ಲವೆ ಬಾಲಕರ ಊರು-ಕೇರಿ ನೆರೆ ಹೊರೆಗಳಲ್ಲಿ, ನಡೆದು ಹೋದ
ಘಟನೆ-ಅವುಗಳಿಂದ ಉಂಟಾದ ಫಲಗಳನ್ನು, ಸೂಕ್ಷ್ಮವಾಗಿ ತಿಳಿಸುವುದು ಒಂದು



ಅಂಶವಾದರೆ, ಹೊರಗಡೆ ತನ್ನ ವಿದ್ಯಾರ್ಥಿಗಳ ಅನುಚಿತವಾಗಿ, ನಡೆದುಕೊಂಡು
ದ್ದನ್ನು ಕಂಡರೆ ಆತನಿಗೆ ಮುಖ ಭಂಗಮಾಡದೆ, ಆತನ ತಪ್ಪು ಆತನಿಗೆ ಅರಿವಾಗು
ವಂತೆ ತಿಳಿಸಬೇಕು. ಇಡೀ ತರಗತಿಯ ಎದುರಿನಲ್ಲಿ ಹೀಯಾಳಿಸಬಾರದು. ಒಂದು
ವೇಳೆ ತಾನೇ ತಪ್ಪು ಮಾಡಿದರೆ ನೇರವಾಗಿ " ಅಪ್ಪ, ಮಕ್ಕಳಿರಾ ! ಬೇಕು ಅಂತ
ಮಾಡಲಿಲ್ಲ ! ತಿಳಿಯದೆ ಅಕಸ್ಮಾತು ಆಗಿ ಹೋಯಿತು! ನೀವು ಹೇಗೆ ತಪ್ಪುತಿದ್ದಿ ಕೊಳ್ಳು
ವಿರೊ, ಹಾಗೆ ನಾನು ತಿದ್ದುಕೊಳ್ಳುತ್ತೇನೆ" !ಎಂದು ತಿಳಿಸಬೇಕು.

8 " ಕೆರೆಯ ನೀರನ್ನು ಕೆರೆಗೆ ಚೆಲ್ಲು " ಎಂಬಂತೆ ಮಕ್ಕಳ ದುಡ್ಡನ್ನು
ಮಕ್ಕಳಿಗೆಯೇ ವಿನಿಯೋಗಿಸಬೇಕು. ಪ್ರಕೃತಿಯು ಆನಿಯಮವನ್ನು ಪರಿಪಾಲಿಸು
ತ್ತಿರುವುದು ಮೋಡ ಕಟ್ಟುತ್ತೆ. ಮಳೆ ಸುರಿಸುತ್ತೆ, ಕೆರೆ-ಕುಂಟೆ-ನದಿ- ಕಾಲುವೆಗ
ಳಲ್ಲಿ ಆ ನೀರು ಸೇರುತ್ತೆ, ಸೂರ್ಯನಿಂದ ತನ್ನನ್ನು ಕಾಯಿಸಿಕೊಂಡು, ಆವಿಯಾಗಿ
ಮೇಲೆದ್ದು, ಆಕಾಶಗಂಗೆಯಾಗಿ ಮೋಡವಾಗಿ ಪರಿವರ್ತಿಸಿಕೊಂಡು, ಪುನಃ ಮಳೆ
ಯಾಗಿ ಬೀಳುತ್ತೆ ಆದುದರಿಂದ ಪ್ರಕೃತಿ ದೊಡ್ಡದು - ದೇವರು ಎಂದು ಭಾವಿಸು
ತ್ತೇವೆ. ಉಪಾಧ್ಯಾಯನು , ಪ್ರಕೃತಿ- ದೇವರು-ಗುರುಗಳು ಎನಿಸಿಕೊಳ್ಳುವನು.
ವಿದ್ಯಾರ್ಥಿಯು ಸಮಾಜ ಸರ್ಕಾರಗಳಲ್ಲಿ ಉಚ್ಚಸ್ಥಾನಮಾನಗಳಿಗೆ ಕಾರಣನಾ
ಗುವನು.

9 ನಾನು ಬಾಲಕನಾಗಿ ವಿದ್ಯಾರ್ಥಿಯಾಗಿದ್ದಾಗ ಶ್ರೀಗಳಾವ ವೆಂಕಟಕೃಷ್ಣಯ್ಯ
ರಾಮರಾಯರು– ಕೃಷ್ಣಪ್ಪನವರು ಗುಂಜ ನರಸಿಂಹಯ್ಯನವರು—ಬಾಪುರಾಯರು
.......ಮೊದಲಾದವರನ್ನು ಈಗಲೂ ಆಗಾಗ್ಗೆ ಸ್ಮರಿಸುಕೊಳ್ಳುತ್ತಿರುವೆನು—ನನಗೆ
81 ವರ್ಷ ವಯಸ್ಸಾಗಿದ್ದರುಕೂಡ ಉಪಾಧ್ಯಾಯನಾದವನು ಸಮಯಬಂದಾಗ,
ಮುಕ್ತ ಕಂಠದಿಂದ ತನ್ನ ಗುರುಗಳ ಜೀವನದ ಶ್ರೇಷ್ಠತೆಯನ್ನು ತಿಳಿಸುವುದು.
ಇದರಿಂದ ಬಾಲಕರ ಮೇಲೆ ಭಕ್ತಿಯ ಪರಿಮಾಣ ಬೆಳೆದು ಏನಪ್ಪಾ ! ನಮ್ಮ ಈ
ಆದರ್ಶ ಉಪಾಧ್ಯಾಯರೆ ತಮ್ಮ ಗುರುಗಳನ್ನು ನೆನೆದುಕೊಂಡು, ಭಕ್ತಿಯನ್ನು ಅರ್ಪಿ
ಸುವಾಗ, ನಾವು ಈ ಗುರುಗಳಲ್ಲಿ ಇನ್ನೆಷ್ಟು ಅತಿಶಯವಾದ ಭಕ್ತಿಯನ್ನು ತೋರ್ಪ
ಡಿಸಬೇಕು" ಎಂದು ಆ ಮಕ್ಕಳೇ ತಂತಮ್ಮಲ್ಲಿ ವಿಚಾರ ವಿನಿಮಯ ಮಾಡಿಕೊ
ಳ್ಳುವರು.

ಕೊನೆಯದಾಗಿ ಒಂದು ಮಾತು. ಉಪಾಧ್ಯಾಯನ ಕಾಯಕವು ಕಾಯ
ಕಗಳಲ್ಲಿ ಅಗ್ರಸ್ಥಾನ ಪಡೆಯುವುದು, ಆತನೆ ಮಾರ್ಗದರ್ಶಕ ಆತನೇಸತ್ಪ್ರಜೆಯನ್ನಾಗಿ
ಮಾಡುವ ಶಿಲ್ಪಿಯು....ಈ ಗುಣಗಳೆಲ್ಲವು ಆ ಉಪಾಧ್ಯಾಯನಲ್ಲಿ ಭೂಷಣಗಳಾಗಿ,
ಕಂಡುಬರಬೇಕು.



# "ಸತಿ ಎಂದರೆ ಮುನಿವರು ನಮ್ಮ ಶರಣರು" ಏಕೆ ?

**ಲಲ್ಲೇಶ್ವರಿಮುಗಿ**



'ಶೂನ್ಯ ಸಂಪಾದನೆ' ಯು ಜಗತ್ತಿನ ಅನುಭಾವ ಸಾಹಿತ್ಯದಲ್ಲಿ, ಚರಿತ್ರೆ-
ಯಲ್ಲಿ ಮೇರುಗ್ರಂಥವಾಗಿ ನಿಲ್ಲಬಹುದಾದ ಕೃತಿ. ವೀರಶೈವ ವಾಙ್ಮಯದಲ್ಲಿ ಅದಕ್ಕೆ
ಅಗ್ರಹಪಟ್ಟ ಸಲ್ಲಿದೆ. ಅದರ ಮೂಲ ಕರ್ತೃ ಶಿವಗಣ ಪ್ರಸಾದಿ ಮಹಾದೇವನು
ಅನಂತರ ಹಲಗೆಯಾರ್ಯ, ಗುಮ್ಮಳಾ ಪುರದ ಸಿದ್ಧಲಿಂಗ ಮತ್ತು ಸಿದ್ಧವೀರ-
ಣ್ಣೊಡೆಯರು ಈ 'ಶೂನ್ಯ ಸಂಪಾದನೆ' ಯನ್ನು ತಮಗೆ ತಿಳಿದಂತೆ ಹಿಗ್ಗಿಸಿ,
ವಿಸ್ತರಿಸಿ, ಸಂಸ್ಕರಣಗೊಳಿಸುವರು. ಇವರೆಲ್ಲರ ಗ್ರಂಥಗಳಲ್ಲಿ 'ಮಹಾದೇವಿಯಕ್ಕ-
ಗಳ ಸಂಪಾದನೆ' ಯು ಬರುತ್ತದೆ. ಆದರೆ ಆಯಾ ಗ್ರಂಥಗಳಲ್ಲಿ ಅನುಕೂಲತೆಗಾಗಿ
ಸಂಧಿಗಳ ವ್ಯತ್ಯಾಸಗಳು ಕಂಡು ಬರುತ್ತವೆ. ಅಷ್ಟೇಅಲ್ಲ, ಪ್ರತಿಯೊಬ್ಬ ಸಂಪಾದನೆ
ಕಾರರೂ ತನಗೆ ಹೊಳೆದಂತೆ ಮಹಾದೇವಿಯಕ್ಕಗಳ ಅನುಭಾವದ ನಿಲವನ್ನು
ವೈರಾಗ್ಯದ ಹಿರಿಮೆಯನ್ನು ಚಿತ್ರಿಸಲು ಸನ್ನಿವೇಶಗಳನ್ನು ಹಿಗ್ಗಿಸಿರುವನು. ಅದರಲ್ಲಿ
ಹಲಗೆಯಾರ್ಯನಿಗಂತೂ ಯಾವುದೂ ಸಭ್ಯಗೃಹಸ್ಥರ ಎಲ್ಲ ಎಲ್ಲೆಗಳನ್ನು ಮೀರಿ
ಅಕ್ಕನವರ ಮತ್ತು ಕಿನ್ನರಯ್ಯನ ಸನ್ನಿವೇಶವನ್ನು ವಿವರಿಸುತ್ತಾನೆ. ಮಹಾದೇವಿ-
ಯಕ್ಕನನ್ನು ಪರೀಕ್ಷಿಸಿದ ರೀತಿಯನ್ನು ಉದ್ಧರಿಸುವುದು ತರವಲ್ಲ, ಮತ್ತು ನಾನು
ಎತ್ತಿ ಕೊಂಡಿರುವ ವಿವೇಚನೆಯ ವಸ್ತುವೂ ಅದು ಅಲ್ಲ. 'ಮಹಾದೇವಿಯಕ್ಕ
ಗಳ ಸಂಪಾದನೆಯನ್ನು ಓದುವಾಗ ನನಗೆ ಅನಿಸಿದ ಒಂದೆರಡು ಪ್ರಾಮಾಣಿಕವಾದ
ಸಂದೇಶವನ್ನು ಚರ್ಚಿಸಿ ಬಲ್ಲವರಿಂದ ಅದಕ್ಕೆ ಸರಿಯಾದ ಪರಿಹಾರನ್ನು ಸಂಪಾದಿಸ
ಬೇಕೆಂಬುದೇ ನನ್ನ ಉದ್ದೇಶ.

"ಇಂತು ಪ್ರಭುದೇವರು, ಬಸವರಾಜ ದೇವರು, ಚಿಕ್ಕದಣ್ಣಾಯಕ ಮಡಿವಾಳ ಮಾಚಿ
ತಂದೆಗಳು, ಸಿದ್ಧರಾಮಯ್ಯ ದೇವರು, ಮಹಾನುಭಾವ ಗೋಷ್ಠಿಯಂ ಮಾಡುತ್ತಿರಲು
ಕೆಲಬಲದಲ್ಲಿದ್ದ ಸೊಡ್ಡಳ ಬಾಚರಸರು, ಹಡಪದಪ್ಪಣ್ಣಗಳು, ಪಡಿಹಾರಿ ಉತ್ತಣ್ಣ,
ಅಕ್ಕನಾಗಲಾಯಿಗಳು, ಮೋಳಿಗೆಯ ಮಾರಯ್ಯ, ಚೋಹಾರ ಕಕ್ಕಯ್ಯ, ಕಿನ್ನರ
ಬೊಮ್ಮಣ್ಣ, ಕನ್ನದ ಮಾರಣ್ಣ, ಮಿಂಡ ಮಲ್ಲಿನಾಥ, ಕೋಲ ಶಾಂತಯ್ಯ, ಓಲಗದ
ಕೇಶೀರಾಜ ದೇವರು, ಖಂಡಣೆಯ ಕೇಶಿರಾಜರು, ಮುಖ್ಯವಾದ ಅಸಂಖ್ಯಾತ

ಗಣಂಗಳೆಲ್ಲರೂ ಈ ಮನುಭಾವ ಪ್ರಸಂಗ ಮಂಕೇಳಿ, ನಿತ್ಯ ನಿಜತತ್ವದಲ್ಲಿ ಸಮರ ಸರಾಗಿ ಓಲಾಡುತ್ತಿರಲು " ಹೀಗೆ ಸನ್ನಿವೇಶವು ಪ್ರಾರಂಭವಾಗ್ಗಿ" ಇತ್ತ........... ಮಹಾದೇವಿಯಕ್ಕಗಳು ಸಕಲ ಜನಂಗಳೆಲ್ಲರ ಕೃತಾರ್ಥವಂ ಮಾಡುತ್ತ ಬಪ್ಪಾಗಳು' ಆಗ ಬಸವರಾಜ ದೇವರು 'ಎನ್ನ ಹೆತ್ತತಾಯಿ ಅಕ್ಕಮಹಾದೇವಿಯವರು ವಿರಕ್ತಿಯಿಂದ ದಿಗಂಬರೆಯಾಗಿ, ಬರುತ್ತಿದ್ದ ಪಳೆಂದು ಬಿನ್ನೈಸುವರು " ಅದನ್ನು ಕೇಳಿ ಆಕೆಯು ಕೌಮಾರಿ ಎಂಬುವುದನ್ನು ಪರೀಕ್ಷಿಸಿ ನೋಡಲು ಕಿನ್ನರಯ್ಯನೆಂಬ ಶರಣನನ್ನು ಕಳಿಸುವರು " ಸರ್ವಾಂಗವನ್ನು ಪರೀಕ್ಷಿಸಿ ನೋಡಲು ಕಳುಹಿಸುತ್ತಾ ಕಿನ್ನರಿ ಬೊಮ್ಮಯ್ಯನು ಅಕ್ಕನ ದಿವ್ಯಸ್ವರೂಪದಲಾವಣ್ಯನನ್ನು ನೋಡಿ ಈಕೆ ಲಿಂಗಾನಭವ ಸಂಪನ್ನೆಯಾದರೆ ಗುರುತಾಯಿ ಎಂದು ಶರಣೆಂಬೆನು. ಅಲ್ಲಾ- ದೇಹಭಿಮಾನವುಳ್ಳಡೆ ಸ್ತ್ರೀಯಾಗಿ ಕೈಹಿಡಿವನು " ಎಂದು ಪ್ರತಿಜ್ಞೆಮಾಡಿ ಮಹಾ- ದೇವಿಯಕ್ಕನನ್ನು ಸರ್ವಾಂಗ ಸ್ಥಾನಮಾನಂಗಳಂ (ಪರುಕಿಸಿ ನೋಡಲು ) ಪರೀಕ್ಷಿಸಿ ನೋಡಲು ಹೋಗುವನು.

ಇಲ್ಲಿ ಮೂಡಿಬರುವ ಸಂದೇಹವೆಂದರೆ ಬಸವಣ್ಣನವರು ಅನುಭವ ಮಂಟಪ- ದಲ್ಲಿಯಸಮಸ್ತ ಪ್ರಥಮರಿಗೆ " ನನ್ನ ಹೆತ್ತತಾಯಿ ಮಹಾದೇವಿಯಕ್ಕಗಳು ಬರುತ್ತಿರುವರು " ಎಂದು ಹೇಳಿದ ಮೇಲೆಯೂ ಅಕ್ಕನವರನ್ನು ಪರೀಕ್ಷಿಸುವ ಪ್ರಸಂಗದ ಔಚಿತ್ಯವೇನು ? ಒಬ್ಬ ಹೆಣ್ಣು ಮಗಳ ಬಗ್ಗೆ ಯಾರಾದರೂ ತಮ್ಮ ಅಭಿಪ್ರಾಯ ವ್ಯಕ್ತಪಡಿಸುವದಾದರೆ ಆಕೆ ನನ್ನ ಹೆತ್ತತಾಯಿ ಸಮಾನವೆಂದು ಹೇಳುವರು. ಇದಕ್ಕಿಂತಲೂ ಹೆಚ್ಚಿನ ಗೌರವವನ್ನು ಯಾರು ಯಾವ ಭಾಷೆಯಲ್ಲಿ ಯೂ ವ್ಯಕ್ತ ಗೊಳಿಸಲಾರರು. ಇಲ್ಲಿ ಬಸವಣ್ಣನವರು ಹೆತ್ತ ತಾಯಿ ಸಮಾನ ವೆಂದು ಹೇಳಿಲ್ಲ. ನನ್ನ ಹೆತ್ತ ತಾಯಿಯೇ ಎಂದು ಹೇಳಿದ್ದಾರೆ ಆಕೆ ಗುಣ ವೈಶಿಷ್ಟ್ಯಗಳಿಂದ ಹೆತ್ತತಾಯಿಯೇ ಎಂದು ಹೇಳಿರುವರು. ಇಷ್ಟು ಹೇಳಿದ ಮೆಲೆಯೂ ಪ್ರಥಮರಿಗೆ ನಂಬಿಕೆ ಹುಟ್ಟಲಿಲ್ಲವೋ ? ಬಸವಣ್ಣನವರ ಮಾತಿಗೆ ಬೆಲೆ ಏನು ? ಪ್ರಭುದೇವರು ಬಸವಣ್ಣನವರ ಮಾತಿನ ಇಂಗಿತವನ್ನು ಅರಿಯಲು ಅಸಮರ್ಥರೆ ? ಅನುಭವ ಮಂಟಪದ ಶರಣರು ಸಾಮಾನ್ಯರೆ ? ಮೇಲೆ ಉಲ್ಲೇಖಿಸಿದ ಶಿವಶರಣರು ಬಸವಣ್ಣನವರು ಹೇಳಿದ ಮೇಲೆಯೂ ಅಕ್ಕನನ್ನು ಗುರ್ತಿಸದಷ್ಟು ಅನನುಭವಿಗಳೇ ? ............ಆದರೂ ಅಕ್ಕನ ಪರೀಕ್ಷೆ ನಡೆದು ಹೋಗುತ್ತದೆ.

ಕಲ್ಯಾಣಕ್ಕೆ ಬಂದ ಅಕ್ಕ " ಒಳಗು ತಿಳಿದು ಚೆನ್ನಮಲ್ಲಿಕಾರ್ಜುನಗೊಲಿದು, ಉಭಯ ಲಜ್ಜೆಯ ನಳಿದು ಕಲ್ಯಾಣವನ್ನು ಕಂಡು ನಮೋ ನಮೋ " ಎಂದಳು ಕಲ್ಯಾಣನಗರದ ಒಳ ಹೊಕ್ಕು ಬಸವಣ್ಣನವರ ಮಹಾತ್ಮೆಯನ್ನು ಕೊಂಡಾಡಿದಳು. ಶರಣವೃಂದವನ್ನು ಕಂಡು ಹರುಷಗೊಂಡು ತಲೆಬಾಗಿ ಕೈಮುಗಿದು ನಿಂದಳು. ಎಲ್ಲ ಶರಣರಿಗೆ ಬಸವಣ್ಣನವರು ಮಹಾದೇವಿಯಕ್ಕನ ಪರಿಚಯ ಮಾಡಿಕೊಟ್ಟರು.—



" ಕಾಯದ ಲಜ್ಜಯ ಕಲ್ಪಿತವ ಕಳೆದು
ಜೀವದ ಲಜ್ಜೆಯ ಮೋಹವನಳಿದು,
ಮನದ ಲಜ್ಜೆಯ ನೆನಹಹುಟ್ಟು,
ಭಾವದ ಕೂಟ ಹತ್ತಲೆಯೆಂದರಿದು,
.................ಎನ್ನ ಹೆತ್ತತಾಯಿ
ಮಹಾದೇವಿಯಕ್ಕನ ನಿಲವ ನೋಡಾ "— ಎಂದು

ಅಕ್ಕನ ಇರವನ್ನು ವಿವರಿಸಿದರು.
ದಿಗಂಬರಿಯಾಗಿ ಬಂದ ಅಕ್ಕನ ರೂಹವನ್ನು
ಕಂಡು ಬೆರಗಾದ ಶರಣರಿಗೆ ಬಸವಣ್ಣನವರು
ಹೀಗೆ ಹೇಳುತ್ತಾರೆ—

" ರೂಹಿಲ್ಲದಂಗೆ ಒಲಿದವರಿಗೆ ತನುವಿನ ಹಂಗುಂಟೆ ?
ಮನವಿಲ್ಲದವರಿಗೆ ಒಲಿದವರಿಗೆ ಅಭಿಮಾನದ ಹಂಗುಂಟೆ ?
ದಿಗಂಬರಂಗೆ ಒಲಿದವರಿಗೆ ಕೌಪೀನದ ಹಂಗುಂಟೆ ?
ಕೂಡಲ ಸಂಗಮದೇವಯ್ಯ ಮಹಾದೇವಿಯಕ್ಕನೆಂಬ
ಭಕ್ತೆಗೆ ಆವ ಹೊರೆಯೂ ಇಲ್ಲ ನೋಡಾ "
—ಎಂದು ಅಕ್ಕನ ನಿಲವನ್ನು ನಿಚ್ಚಳ ಗೊಳಿಸಿದರು.

ಅನುಭವ ಮಂಟಪದ ಅಧ್ಯಕ್ಷರಾದ ಪ್ರಭು ದೇವರು ಪರಿಕಿಸುವರು.

" ಉದಮದದ ಯೌವ್ವನವನೊಳಗೂಂಡ
ಸತಿ ನೀನು ಇತ್ತಲೇತಕ್ಕೆ ಬಂದೆಯವ್ವಾ ?
ಸತಿ ಎಂದರೆ ಮುನಿವರು ನಮ್ಮ ಶರಣರು
ನಿನ್ನ ಪತಿಯ ಕುರುಹ ಹೇಳಿದರೆ ಬಂದು
ಕುಳ್ಳಿರು ಇಲ್ಲದಿರೆ ತೊಲಗು ತಾಯೆ............
...................................... "
—ಎಂದು ಅಕ್ಕನನ್ನು ಉದ್ದೇಶಿಸಿ ಕೇಳುವರು ಅಲ್ಲದೆ

" ಸತಿಯರಗೋಷ್ಠಿ ವಿಷಕಾವ್ವ ನಿನ್ನ ಪತಿಯ ಕುರುಹ ಹೇಳಾ ಎಲೆ ಅವ್ವಾ" ಎಂದು ಕೇಳಿರುವರು.

'ಶೂನ್ಯ ಸಂಪಾದನೆ' ಯಲ್ಲಿ ಬಂದಿರುವ ಈ ಸನ್ನಿವೇಶವನ್ನು ಓದುವಾಗ ನಮ್ಮ ಎದುರಿಗೆ ಒಂದು ಪ್ರಶ್ನೆ ಉದ್ಭವಿಸುತ್ತದೆ. ಅದು 'ಸತಿ ಎಂದರೆ

ಏಕೆ ಮುನಿವರು ಶರಣರು? ಸತಿಯ ಗೋಷ್ಠಿಯನ್ನು ವಿಷವೆಂದು ಏಕೆ ಕಂಡರು ? ಎಂಬುದು.

ಸತಿ ಎಂದರೆ ಪಾವಿತ್ರ್ಯದ ಕುರುಹು. ಸತಿ ಎಂಬ ಶಬ್ದಕ್ಕೆ ಅರ್ಥಸಾಧ್ವಿ, ಗಂಡುಳ್ಳವಳು, ಗರತಿ ಪವಿತ್ರ ಚಾರಿತ್ರ್ಯವುಳ್ಳವಳು ಎಂದಾಗುತ್ತದೆ. ಮಹಾಸತಿ ಶಬ್ದವು ಭಾರತೀಯ ಸಂಸ್ಕೃತಿಯ ಹಿರಿಮೆಯ ಧ್ಯೋತಕವಾಗಿ ಬಳಸಲ್ಪಡುತ್ತದೆ. ನಮ್ಮ ದೇಶದ ತುಂಬ ಮಹಾಸತಿಯ ಕಲ್ಲುಗಳು ಹಳ್ಳಿಹಳ್ಳಿಗಳಲ್ಲಿಯೂ ಭಾರತ ಸ್ತ್ರೀಯರ ತ್ಯಾಗ ಬಲಿದಾನಗಳು ಚಿರಶಾಸನಗಳಾಗಿ ನಿಂತಿರುವುದನ್ನು ಇಂದಿಗೂ ನಾವು ಕಾಣುತ್ತೇವೆ. 'ಸತಿ' ಎಂಬ ಶಬ್ದವು ಹೆಣ್ಣಿನ ಗುಣವಿಶೇಷಣವ ಸುಂದರ ಪದವಾಗಿದೆ, " ಮಾದಿರಾಜನ ಸತಿ ಮಾದಲಾಂಬಿಕೆಯ ಗರ್ಭದಿಂ ಧರೆಯ ನೊಡೆದು ಮಾಡಿದ ಸ್ವಯಂಭಲಿಂಗದಂತೆ ಉದ್ಭವಿಸಿ ''ದ ಬಸವಎಂದು ಬಸವಣ್ಣನವರ ಬಗೆ ಹೇಳುವಾಗ ಶೂನ್ಯ ಸಂಪಾದನೆಕಾರರು 'ಸತಿ' ಎಂಬ ಶಬ್ದವನ್ನು ಉಪಯೋಗಿಸಿರುವರು. ಅಲ್ಲದೆ ಬಸವಣ್ಣನವರು " ನಾನೇಸತಿ ನೀನೇಪತಿ " ಎಂದು ಕೂಡಲ ಸಂಗಮನಿಗೆ ನೀಲಲೋಚನೆಯ ಬಗ್ಗೆ " ಪೃಥ್ವಿಗಗ್ಗಳೆ ಚಲುವೆನನ್ನಸತಿ ನೀಲಲೋಚನೆ " ಎಂದು ಹೇಳಿದ್ದಾರೆ. ಸತಿಶಬ್ದವು ಅತ್ಯಂತ ಗೌರವಯುಕ್ತವಾದ ಪದವೆಂಬುದಕ್ಕೆ ಇನ್ನೂ ಅನೇಕ ಉದಾಹರಣೆಗಳನ್ನು ಕೊಡಬಹುದು.

ಹೀಗಿರಲು ಎಂದರೆ ಏಕೆ ಮುನಿವರು ಶರಣರು ? ಅಲ್ಲದೆ ಪತಿಯ ಹೆಸರು ಹೇಳಿದರೆ ಕೇಳಿರಬೇಕು ಇಲ್ಲದಿರೆ ತೊಲಗಬೇಕು ಎಂದರು. ಅಂದರೆ ಅಲ್ಲಿಪತಿ ಇಲ್ಲದವರಿಗೆ ಪ್ರವೇಶವಿಲ್ಲವೋ ಹೇಗೆ ? ಹಾಗಿದ್ದರೆ ಹೆಣ್ಣು ಗಂಡಿನಲ್ಲಿ ತಾರತಮ್ಯವಿಲ್ಲದ ಶರಣರ ದೃಷ್ಟಿಯಲ್ಲಿ ಸತಿ ಇಲ್ಲದವರಿಗೆ ಪ್ರವೇಶವಿಲ್ಲವೋ ಹೇಗೆ ಸತಿಯರ ಗೋಷ್ಠಿ ವಿಷವಾಗಿ ಏಕೆ ಕಂಡಿತ್ತು ? ಲಿಂಗವಂತರ (ಶರಣರ) ಅನು-ಭಾವಗೋಷ್ಠಿಯನ್ನು ಪರಿಶೀಲಿಸಿದಾಗ 'ಶರಣಸತಿ, ಲಿಂಗಪತಿ' ಎಂಬ ಮಾತು ಇದಕ್ಕೆ ಪರಿಹಾರವನ್ನು ಒದಗಿಸುತ್ತದೆ. ಪತಿಯ ಹೆಸರು ಹೇಳಿದರೆ ಬಂದು ಕುಳ್ಳಿರು ಇಲ್ಲದಿರೆ ತೊಲಗು, ಎಂದರು ಹಾಗೆಂದರೆ ಲಿಂಗನಿಷ್ಠೆ (ಭವಿ) ಇಲ್ಲದವರಿಗೆ ಅಲ್ಲಿ ಪ್ರವೇಶವಿರಲಿಲ್ಲವೆಂದು ಅರ್ಥವಾಗುತ್ತದೆ. ಪ್ರಭುದೇವರೂ ಈ ದೃಷ್ಟಿಯಿಂದ ನೋಡಿದರೆ ಸತಿಯೇ. ಹಾಗಿದ್ದರೆ ಸತಿ ಎಂದರೆ ಏಕೆ ಮುನಿದರು " ಪರವಧು-ವನ್ನು ಮಹಾದೇವಿಯೆಂಬೆನಯ್ಯ" ಎಂದರು. ಶಿವಯೋಗಿ ಸಿದ್ಧರಾಮೇಶ್ವರರು " ಹೆಣ್ಣು ಪ್ರತ್ಯಕ್ಷ ಕಪಿಲ ಸಿದ್ಧಮಲ್ಲಿಕಾರ್ಜುನಾ ನೋಡಾ " ಎಂದರು ಶರಣರ ದೃಷ್ಟಿಕೋನದ ಹಿನ್ನೆಲೆಯಲ್ಲಿ ನೋಡಿದಾಗ ಅವರು ಹೆಣ್ಣಿನಲ್ಲಿ ದೇವರ ಸ್ವರೂಪವನ್ನು ಕಂಡರು. ಆದರೆ ಪ್ರಭುದೇವರ ವಚನದಲ್ಲಿ " ಸತಿ ಎಂದರೆ ಮುನಿವರು ನಮ್ಮ



ಶರಣರು " ಇದಕ್ಕೆ ಅರ್ಥೈಸಬೇಕು ? " ಸತಿಯರ ಗೋಷ್ಠಿ ವಿಷಕಾಣವ್ವಾ " ಎಂಬ ವಚನವು ಮೂಲ ಸಂಪಾದನೆಕಾರ ಶಿವಗಣ ಪ್ರಸಾದಿ ಮಹದೇವಯ್ಯನಲ್ಲಿ ಇಲ್ಲ. ಮುಂದಿನ ಮೂರು ಪರಿಷ್ಕರಣಕಾರರು ಈ ವಚನವನ್ನು ಏಕೆ ಸೇರಿಸಿದರು ? ಹೀಗೆ ಕುತೂಹಲ ಕಾರಿಯಾದ ಸಮಸ್ಯೆಗಳು ನಮ್ಮೆದುರಿಗೆ ನಿಲ್ಲುತ್ತವೆ. ಈ ಮಾತನ್ನು ಆಲೋಚಿಸಿದಷ್ಟೂ ನಮ್ಮ ವಿಚಾರಕ್ಕೆ ಪ್ರಚೋದನೆಯು ದೊರೆಯುತ್ತದೆ. ವಚನ-ವಾಙ್ಮಯದಲ್ಲಿ ಆಳವಾದ ಅಭ್ಯಾಸವುಳ್ಳವರು, ಸಂಶೋಧನೆಯಲ್ಲಿ ಪರಿಶ್ರಮಿಸಿದವರು, ಇದಕ್ಕೆ ಅಕ್ಕಮಹಾದೇವಿಯ ಈ ಸಂದರ್ಭವನ್ನು ವಿಚಾರಿಸಿದಾಗ ಅಕ್ಕನಿಗೆ ಶರಣರು ಪರಿಪರಿಯ ಪರೀಕ್ಷೆಗೆ ಒಳಪಡಿಸುವರು. ಅಕ್ಕ ಎಲ್ಲ ಪ್ರಶ್ನೆಗಳಿಗೆ ಸಮರ್ಪಕವಾದ ಉತ್ತರಗಳನ್ನು ಕೊಡುತ್ತಾಳೆ. ವೈರಾಗ್ಯದಲ್ಲಿ, ಜ್ಞಾನದಲ್ಲಿ, ಅನುಭಾವದಲ್ಲಿ ಅಕ್ಕ ತನ್ನ ಪ್ರತಿಭೆಯನ್ನು. ವ್ಯಕ್ತ ಗೊಳಿಸಿದಳು. ಆಗ " ಅಕ್ಕನ ಶ್ರೀ ಪಾದಕ್ಕೆ-ನಮೋ ನಮೋ " ಎಂದರು ಪ್ರಭುದೇವರು. ಅಲ್ಲದೆ ಎಲ್ಲ ಶರಣರೂ ಮನ ತುಂಬಿ ಕೊಂಡಾಡಿದರು.

" ಅಜ ಕೋಟಿ ವರುಷದರೆಲ್ಲರೂ ಹಿರಿಯರೇ ?
ಹುತ್ತೇರಿ ಬೆತ್ತ ಬೆಳೆದ ತಪಸ್ವಿಗಳೆಲ್ಲರೂ ಹಿರಿಯರೇ ?
ನಡು ಮುರಿದ, ಗುಡುಗೂರಿ, ಒಂದನಾತ ಹೋಗಿ
ಒಂಭತ್ತನಾಡುವ ಅಜ್ಞಾನಿಗಳೆಲ್ಲರೂ ಹಿರಿಯರೆ ?
ಅನುವರಿತು, ಘನವಬೆರಿಸಿ, ಹಿರಿಕಿರಿದೆಂಬ
ಭೇದವ ಮರೆದು, ಕೂಡಲ ಚೆನ್ನಸಂಗಯ್ಯನಲ್ಲಿ
ಬೆರಸಿ ಬೇರಿಲ್ಲದಿಪ್ಪ ಹಿರಿತನ ನಮ್ಮ ಮಹಾದೇವಯಕ್ಕಂಗಾಯ್ತು''

—ಎಂದು ಷಟ್‌ಸ್ಥಲ ಚಕ್ರವರ್ತಿಯಾದ ಚೆನ್ನಬಸವಣ್ಣನವರು ಅಕ್ಕನ ಹಿರಿಮೆಯನ್ನು ಅರುಹಿದರು.

# ಜೀವನ ಜಂಜಾಟ

**ಮಹೇಶ. ಎಸ್. ಭಟ್ಟ**, ಕಾರವಾರ.

ಅಚ್ಚಹಸುರಾಗಿ ಕಿಚ್ಚುಂಡು ಬೆಳೆದ
ಈ ನಮ್ಮ ಹೂದೋಟ' ಬಾವುಟ
ಸಿಕ್ಕರೆ ಫಕ್ಕನೆ ಬಿತ್ತುವದು
ಜನ ಜೀವ ಜಂಜಾಟ.

ಅಲ್ಲಲ್ಲೆ ಚಿಗುರೆಲೆ ಮೊಗ್ಗುಗಳು
ಮುಗುಳ್ನಕ್ಕ ಮುಗ್ಧಕುಸುಮಗಳು.
ಸುಮಕುಲ ಸವಿಯದವು
ಬೆಡಗು ರಂಗು ರಂಗಿನದು.

ಸಂತಸ ಸಂಚಯುವಹೊತ್ತು
ಸೇರಿಹವು ಸುಮಸಮಾಜದೊಳು
ಹೊತ್ತು ಮೋಹ ಕಾಮಾದಿಗಳು.
ಮಾಗಿ ಹೋದವು ಭಾವಜೀವನವು.

ಹರೆಯಭಾರಕೆ ದೆಸೆ ಗಿರಿ-ನೆರಳು,
ಗಾಳಿ ಬೀಸಲು, ಸಂಚಯದ
ಸುಮ ಸೌರಭವ ತೇಲಿಬಿಡಲು,
ಸಂಪಿಗೆ ನಾಸಿಕದೊಳೆಲ್ಲ ತುಂಬಿ,
ದುಂಬಿಗಳೆಲ್ಲ ತುಂಬ ತುಂಬಿ ಸವಿದು
ಭಾರಕರಗಿ ಮಾಗಿ ಹೂಗಳು,
ಉದುರಿ ದಳಗಳು, ಕರಗಿ
ಕಣ್ಣಂಚಲ್ಲೇ ಕಂಬನಿಯಾಗಿ.
ಮೂರು ಗಳಿಗೆಯ ಬಾಳು ಮಗಮಗಿಸಿಮಾಗಿ.
ಸುಳಿಗಾಳಿಲಿ ದೈವ ಸೊನೆ ಸಂದರೆ
ಸಾಕೆಂಬ ಬಗೆ ಬೇರೆ ಭಾವವು

ಬಗೆ ಬಗೆಯಾಗಿ ಬಗೆದ ಬಾಳು
ಮುಪ್ಪು ಉಪ್ಪಿನ ಕಹಿಅನುಭವವು
ಗೊತ್ತಾಗದೆ ಬಂದು ಮುತ್ತುವವು
ಮಿಥ್ಯ ಜೀವನದೊಳು.



# ಸಿಬಿಯ ಚಿತ್ರಕಲೆ (1800 ಕ್ರಿ. ಶ.)

**ಡಾ|| ಕೆ. ಶಿವರಾಮಕಾರಂತ** ಹಿರಿಯ ಲೇಖಕರು ಸಾಲಿಗ್ರಾಮ ದ. ಕ.

ತುಮಕೂರು ಜಿಲ್ಲೆಯ ಸಿ ಬಿ ಎಂಬ ಹಳ್ಳಿ ಸಿರಾರಸ್ತೆಯ ಮಗ್ಗುಲಲ್ಲಿ ಸಿಗುವ ಒಂದು ಚಿಕ್ಕ ಸ್ಥಳ. ಅಲ್ಲಿನ ನರಸಿಂಹ ದೇವಾಲಯದ ಹಿಂದೆ ಒಂದು ಪ್ರಸಿದ್ಧ ಸ್ಥಳವಾಗಿದ್ದಿರಬೇಕು, ಇಂದು ಈ ದೇವಾಲಯದ ಸುತ್ತಲೂ ಬೆಂಗಾಡಾಗಿ ಕಾಣಿಸುತ್ತಿದೆ. ಈ ತಾವಿನಲ್ಲಿ ಉಳಿದುಕೊಂಡು ವಸ್ತುಗಳಲ್ಲಿ ನರಸಿಂಹದೇವಾಲಯ ಮತ್ತು ಪ್ರಕಾರ ಸಹಿತವಾದ ಹೆಬ್ಬಾಗಿಲು ಪ್ರಾಮುಖ್ಯ ಅವಶೇಷಗಳಾಗಿವೆ, ಈ ನಿರ್ಮಾಣಗಳು ಎರಡು ಶತಮಾನಗಳ ಹಿಂದಿನ ನಿರ್ಮಾಣಗಳು, ಅದನ್ನು ಟಿಪ್ಪುವಿನ ಕಾಲದಲ್ಲಿ ಕಟ್ಟಿದಂತೆ. ಇಲ್ಲಿನ ಹೆಬ್ಬಾಗಿಲಿನ ಮುಚ್ಚಿಗೆಯಲ್ಲೂ, ದೇಗುಲದ ಹೊರ 60ಬಾಗಿಲ ಮುಚ್ಚಿಗೆಯಲ್ಲೂ ಭಿತ್ತಿ ಚಿತ್ರಗಳು ತುಂಬಿಕೊಂಡಿವೆ. ಇವು ಶ್ರವಣ ಬೆಳಗುಳ, ಶ್ರೀರಂಗಪಟ್ಟಣದ ಭಿತ್ತಿ ಚಿತ್ರಗಳಿಗೆ ಸಮಕಾಲೀನವಾದವು. ಆದರೆ ಇಲ್ಲಿನ ಚಿತ್ರಗಳ ಮೇಲೆ ಆ ಇನ್ನೆರಡು ಸ್ಥಳಗಳ ಯಾವುದೇ ವರ್ಚಸ್ಸು ಬಿದ್ದಿಲ್ಲ. ಇಲ್ಲಿನ ಬಹು ಮಟ್ಟಿನ ಚಿತ್ರಗಳು ಅಪ್ಪಟ ಗ್ರಾಮೀಣ ಶೈಲಿಯವು ಅವುಗಳಲ್ಲಿ ಒಂದಿಷ್ಟು ಕೃತಜ್ಞತೆಯಾಗಲೀ, ನಾಜೂಕಿನ ಪ್ರಯತ್ನಗಳಾಗಲೀ ಕಾಣಿಸುವುದಿಲ್ಲ. ಕೇವಲ ಒಂದೆರಡು ಚಿತ್ರಗಳಲ್ಲಿ ಮಾತ್ರವೇ ಯಾವನೋ ಒಬ್ಬ ಚಿತ್ರಗಾರ, ತನ್ನ ಕಾಲದ ಆಧುನಿಕತೆಯನ್ನು ಹೊರಿಸುವ ಪ್ರಯತ್ನ ಮಾಡಿದ್ದಾನೆ.

ಈ ದೇವಾಲಯದ ಎಲ್ಲಾ ಚಿತ್ರಗಳನ್ನು ಎತ್ತರವಾದ ಮುಟ್ಟಿಗೆಗಳಲ್ಲಿ ಬರೆದಿರುವುದರಿಂದ ಅವನ್ನು ಹಣಕಿ ನೋಡುವ ಕೆಲಸ ಕಷ್ಟದ್ದು ; ದಣಿವು ಬೇಸರಗಳುಂಟಾಗುವಂಥದು. ಅಂಥ ಸ್ಥಳಗಳಲ್ಲಿ ಬರೆದರೆ ಕಿಡಿಗೇಡಿಗಳ ಕೈಯಿಂದ ಅದನ್ನು ರಕ್ಷಿಸಬಹುದೆಂಬ ಮಾತು ನಿಜ. ಆದರೆ ಚಿತ್ರಗಳನ್ನು ನೋಡಲು ಅಪೇಕ್ಷಿಸುವವರು ಸಂತೋಷಪಡಬೇಕಾದರೆ ನೆಲದ ಮೇಲೆ ಮಲಗಿಕೊಂಡೇ ಅವನ್ನು ನೋಡಬೇಕಾಗುತ್ತದೆ.

ಇಲ್ಲಿನ ಚಿತ್ರಗಳು ಲೇಪಾಕ್ಷಿ ದೇವಾಲಯದ ಚಿತ್ರಗಳಂತಿವೆ-ಎಂದು ಕೆಲವು ಮಿತ್ರರು ಹೇಳಿದ್ದನ್ನು, ಒಬ್ಬಿಬ್ಬರು ಬರೆದುದ್ದನ್ನು ಕೇಳಿದ್ದೇನೆ, ಓದಿದ್ದೇನೆ, ಆದರೆ,

ಇವನ್ನು ಸಮೀಪದಿಂದ ಕಂಡಾಗ-ಇವೆಲ್ಲೊ!-ಎನಿಸದಿರಲಿಲ್ಲ. ಲೇಪಾಕ್ಷಿ ಚಿತ್ರಗಳು ವಿಜಯನಗರದ ಚಿತ್ರಗಳಿಗೆ ಸಮಕಾಲೀನವಾದುವು, ಆ ಉಭಯ ಶೈಲಿಗಳಲ್ಲಿ ನಿಕಟ ಸಂಬಂಧ ಕಾಣಿಸುತ್ತದೆ. ಇಲ್ಲಿನವು ಹಾಗಿಲ್ಲವೇ ಇಲ್ಲ. ಇಲ್ಲಿ ನಮಗೆ ಆಸುಪಾಸಿನಲ್ಲಿ ಎಲ್ಲಿಯೂ ಕಾಣಿಸಿಗದ ಶುದ್ಧ ಗ್ರಾಮೀಣವಾದ ಒಂದ ಶೈಲಿ ಕಾಣಿಸುತ್ತದೆ. ಇವನ್ನು ಬರೆದ ಮುಗ್ಧ ಜಾನಪದ ಚಿತ್ರಕಾರರಿಗೆ ಅವು ಶೈಲಿಗಳ ಗಾಳಿಯೇ ಸೋಂಕಿಲ್ಲ. ತಾದ್ರೂಪಿ ಕತೆಯ ಪ್ರಯತ್ನವೂ ಇಲ್ಲಿಲ್ಲ; ಅದಕ್ಕೆ ಬೇಕಾದ ಅಭ್ಯಾಸವೂ ಇಲ್ಲ. ಗುಜರಾತಿನ ಹದಿನಾಲ್ಕನೆಯ ಶತಮಾನದ ಗ್ರಂಥ ಚಿತ್ರಗಳಲ್ಲಿ ಯಾವ ಬಗೆಯ ಸರಳತೆ ಇಲ್ಲಿ ಕಾಣಿಸುತ್ತದೊ, ಅಂಥ ಸರಳತೆ ಇಲ್ಲಿ ಕಾಣಿಸುತ್ತದೆ. ಇದು ಸರಳತೆಯನ್ನಷ್ಟೆ ಕುರಿತು ಹೇಳಿದ ಮಾತು, ಏಕೆಂದರೆ ಗುಜರಾತಿನ ಚಿತ್ರಗಳಲ್ಲಿ ಮುಖ, ಅಂಗ ಭಂಗಿ, ಉಡುಗೆ ಮೊದಲಾದವುಗಳಲ್ಲಿ ಕೆಲವು ಸ್ಪಷ್ಟ ಲಕ್ಷಣಗಳಿವೆ. ಅಲ್ಲಿನ ರೇಖೆಗಳ ಹರಿವು ನಿರ್ದಿಷ್ಟ ದಾರಿಯಲ್ಲಿ ಸಾಗುತ್ತದೆ. ಇಲ್ಲಿ ಅಂಥ ನಿರ್ದಿಷ್ಟ ಲಕ್ಷಣಗಳಿಲ್ಲ; ಬಾಹ್ಯ ರೇಖೆಗಳ ಸತ್ವವೂ ಇಲ್ಲಿನ ಭಿತ್ತಿ ಚಿತ್ರಗಳಲ್ಲಿ ಕಾಣಿಸುವುದಿಲ್ಲ.

ಇಲ್ಲಿನ ಚಿತ್ರಕಾರರು ರಾಮಾಯಣದ ಅನೇಕ ಘಟನೆಗಳನ್ನು ಚಿತ್ರವಸ್ತುಗಳನ್ನಾಗಿ ಆರಿಸಿಕೊಂಡಿದ್ದಾರೆ, ಅನ್ಯ ಹಲವಾರು ವಿಷಯಗಳ ಚಿತ್ರಗಳೂ ಇವೆ. ಚಿತ್ರಗತ ವ್ಯಕ್ತಿಗಳಲ್ಲಿ ದೇವರು, ದಾನವರು, ರಕ್ಕಸರು ಮೊದಲಾದವರು ಬರುತ್ತಾರೆ. ಅಂಥವರನ್ನು ಚಿತ್ರಿಸುವಾಗ ಅಂಗವಿನ್ಯಾಸದಲ್ಲಾಗಲೀ, ಅವುಗಳ ಪರಸ್ಪರ ಪ್ರಮಾಣದಲ್ಲಾಗಲೀ, ದೇಹದ ಸೊಬಗನ್ನೊ, ವಿಕಾರವನ್ನೊ ಚಿತ್ರಿಸುವುದರಲ್ಲಾಗಲೀ, ಯಾವ ಸೂಕ್ಷ್ಮ ಸಂವೇದನೆಯೂ ಇಲ್ಲಿ ಕಾಣಿಸುವುದಿಲ್ಲ. ಒಂದೆಡೆ ರಾವಣನ ಚಿತ್ರ ಬರೆಯಲು ಹೋಗಿ-ಹತ್ತು ಮುಖಗಳನ್ನು ಮೊದಲು ಬರೆದರು. ತಳಗಡೆ ಹತ್ತು ಮುಖಗಳಿಗೆ ಸಮವಾಗಿ, ಇಪ್ಪತು ಕೈಗಳನ್ನು ಬರೆಯಬೇಕಾಗಿದೆ. (ಅದಕ್ಕೆ) ಅದಕ್ಕೆ ಜಾಗ ಸಾಲದು ;ಇರುವಷ್ಟು ಜಾಗದಲ್ಲೇ ಅವನ್ನೆಲ್ಲ ಬರೆದು ತುಂಬಿಸಿದರು. ಒಂದು ಚಿತ್ರದ ಚೌಕಟ್ಟಿನಲ್ಲಿ ಇರುವ ಹಿನ್ನೆಲೆಯ ಮುಂದೆ ಮನುಷ್ಯಾಕೃತಿಗಳನ್ನೊ' ಇನ್ನೇನನ್ನೊ ಬರೆಯಬೇಕಿದ್ದರೆ, ತೋಲ, ಮೇಳಗಳಚಿಂತೆಯಿಲ್ಲದೆ ಬರೆದಿದ್ದಾರೆ ಹೀಗಾಗಿ ಒಂದೇ ಮನುಷ್ಯಾಕೃತಿಯ ಅಂಗ ಭಾಗಗಳನ್ನು ಚಿತ್ರಿಸುವಾಗಲೂ, ಅಂಥ ಮೇಳ ಕಾಣಿಸುವುದಿಲ್ಲ. ಮುಖಕ್ಕೆ ಪ್ರಾಧಾನ್ಯ ಕೊಟ್ಟು, ಉಳಿದ ಅಂಗಾಂಗಗಳ ಗಾತ್ರದ ಕಡೆಗೆ ಹೆಚ್ಚಿನ ಲಕ್ಷ ಕೊಟ್ಟಿಲ್ಲ. ಬರೆದ ರೀತಿಯನ್ನು ನೋಡಿದರೆ ಇವರು ಮೊದಲ ಬಾಹ್ಯ ರೇಖೆಗಳನ್ನು ಹಾಕಿಕೊಂಡು, ಅನಂತರ ಬಣ್ಣಗಳ ಲೇಪನವನ್ನು ಸವರಿ ತಿರುಗಿಮೂಲ ರೇಖೆಗಳನ್ನು ಕಡುಪು ಗೆರೆಗಳಿಂದ ಒತ್ತಿ ತೋರಿಸಿದಂತಿಲ್ಲ. ಅದರ ಬದಲು ಪೂರೈಸಿ, ಅನಂತರ ಕಣ್ಣು, ತಲೆಗೂದಲು' ಮೀಸೆ ಮೊದಲಾದ ಕಡುಪು ಭಾಗಗಳನ್ನು ಬರೆದಂತಿದೆ. ಚಿತ್ರಗತ ವ್ಯಕ್ತಿಗಳ ರಥ, ಉಡುಗೆ, ತೊಡುಗೆ



ಅಲಂಕಾರಗಳನ್ನು ಮತ್ತಷ್ಟು ಸ್ಪಷ್ಟಗೊಳಿಸುವ ಪ್ರಯತ್ನ ಮಾಡಿದ್ದಾರೆ. ಅವನ ಒಟ್ಟು ಪ್ರಯತ್ನದಲ್ಲಿ ಹಿನ್ನೆಲೆ ಎಂಬುದೇಅಮುಖ್ಯ, ಒಂದೊಂದು ಚೌಕಟ್ಟಿನಲ್ಲೂ ಎಂಟು ಹತ್ತು ಆಕೃತಿಗಳನ್ನು ತುಂಬಿದಾಗ, ಅವೇ ಚೌಕಟ್ಟಿನಲ್ಲಿ ಕಿಕ್ಕಿರಿಯುತ್ತವೆ, ಚಿತ್ರದ ಚೌಕಟ್ಟಿನಲ್ಲಿ ಕೇವಲ ಒಂದೆರಡು ಆಕೃತಿಗಳನ್ನಷ್ಟೆ ಆರಿಸಿಕೊಂಡಾಗ ಹಿನ್ನೆಲೆಯ ಪ್ರಭಾವ ಕಾಣಿಸುತ್ತದೆ. ಉದಾಹರಣೆಗೆ- ಒಂದು ಚಿತ್ರದಲ್ಲಿ ಮೋಹಿನಿ ನರ್ತಿಸುತ್ತ ತನ್ನದೆ ತಲೆಯ ಮೇಲೆ ಕೈಯನ್ನಿರಿಸಿಕೊಂಡಿದ್ದಾಳೆ. ಅವಳ ಇದಿರಿರುವ ಭಸ್ಮಾಸುರಿ ಅವಳನ್ನು ಅನುಕರಿಸಿ ತಲೆಯ ಮೇಲೆ ಕೈಯಿಟ್ಟಾಗ ದೇಹದ ಸುತ್ತ ಬೆಂಕಿಯ ಜ್ವಾಲೆ ಹರಡುತ್ತದೆ, ಇಲ್ಲಿ ಕೇವಲ ಎರಡೇ ಎರಡು ಆಕೃತಿಗಳಿವೆ. ಆದರೂ ಅವುಗಳ ಆಜೀವ ಇನ್ನೂ ಒಂದಿಷ್ಟು ಜಾಗ ಬರಿತಾಗಿದ್ದರೆ ಲೇಸಿತ್ತು- ಮೋಹಿನಿಯದು ಸರಳ ಉಡುಪು. ರೇಖೆಗಳ ಬೆಂಬಲವಿಲ್ಲದೆ ಅದರ ಬಣ್ಣಗಾರಿಕೆಯೂ ಕಣ್ಣಿಗೆ ಹಿತವಾದ ರೀತಿಯಲ್ಲಿ ಮೂಡಿ ಬಂದಿದೆ.

ಇದೇ ಚಿತ್ರದ ಮೇಲಕ್ಕೆ ಯಾರೋ ರಥವನ್ನೇರಿ ಹೋಗುವ ಒಂದು ದೃಶ್ಯವಿದೆ. ರಥವೇ ಚಿತ್ರದ ಮುಂದಿದೆ, ಅದರೊಳಗಡೆ ಇಬ್ಬರು ಕುಳಿತಿದ್ದಾರೆ. ಮುಂಗಡೆ ರೆಕ್ಕೆ ಬಿಡಿಸಿದ ಒಬ್ಬ ವ್ಯಕ್ತಿ (ಗರುಡ) ಕಾಣಿಸುತ್ತಿದ್ದಾನೆ, ಅವನ ಕೆಳಗಡೆ ಇರುವ ಇಕ್ಕಟ್ಟಿನ ಜಾಗದಲ್ಲಿ ಜಿಗಿಯುವ ಎರಡು ಪಟ್ಟೆ ಕುದುರೆಗಳಿವೆ. ಕುದುರೆಯ ಹಿಂಭಾಗ ರಥದ ಗಾಲಿಗೆ ಕಾಣುತ್ತದೆ; ಸಾರಥಿಯ ಕಾಲು ಕುದುರೆಯ ಕತ್ತಿಗೆ ತಾಗುತ್ತಿದೆ. ಇನ್ನೂ, ಚಿತ್ರದ ಹಿಂಗಡೆಯಲ್ಲಿರುವ ಅತ್ಯಲ್ಪ ಜಾಗದಲ್ಲಿ ರಥಿಕರಿಗಿಂಕ ದೊಡ್ಡ ಪ್ರಮಾಣದ ನಾಲ್ವರು ಯೋಧರು ನಿಂತಿದ್ದಾರೆ. ಇಲ್ಲಿನ ಅವಕಾಶಕ್ಕೂ (space ) ಆಕೃತಿಗಳಿಗೂ ಹೊಂದಿಕೆಯೇ ಇಲ್ಲ.

ಈ ಚಿತ್ರಗಳ ಇನ್ನೊಂದು ಲಕ್ಷಣ- ಇಲ್ಲಿನ ಬಣ್ಣಗಾರಿಕೆ ಮತ್ತು ಆಕೃತಿಗಳು ರತ್ನಗಂಬಳಿಯ ನೇಯ್ಗೆಯಲ್ಲಿ ಕಾಣಿಸುವ ರೀತಿಯಲ್ಲಿ ಚಿತ್ರವಾದುದು. ಚಿತ್ರವಸ್ತುವಿನ ಆಕೃತಿ, ಬಣ್ಣಗಳನ್ನು ನೇಯ್ಗೆಯ ಹೊಕ್ಕಿನ ಬಣ್ಣದ ನೂಲಿಗೆ ಅನುಕೂಲಿಸುವತೆರನಲ್ಲಿ, ಚಿತ್ತಾರದಂತೆ ಮಾರ್ಪಡಿಸಿಕೊಂಡಿದ್ದಾರೆ. ಆ ದೃಷ್ಟಿಯಿಂದ ಇಲ್ಲಿನ ಚಿತ್ರಗಳ ವಿಶಿಷ್ಟ ರೀತಿಯವು. ಅನ್ಯ ಸಂಪ್ರದಾಯಗಳೊಡನೆ ಇವನ್ನ ಹೋಲಿಸಲೇ ಬಾರದು. ಈ ಚಿತ್ರಕಾರರ ಮನಸ್ಸು ಎಳೆಯ ಮಕ್ಕಳ ಮುಗ್ಧ ಮನಸ್ಸಿನಂತೆ ಇಲ್ಲಿ ಸ್ವಚ್ಛಂಧವಾಗಿ ವಿಹರಿಸುವುದು ಕಂಡುಬರುತ್ತದೆ.

ಈ ದೇವಾಲಯದ ಮುಚ್ಚಿಗೆಯ ಒಂದು ಮುಗ್ಗುಲಲ್ಲಿ ಸುಮಾರು 4×4 ಅಡಿ ಗಾತ್ರದ ಒಂದು ಚಿತ್ರ ಕೃಷ್ಣನನ್ನೂ, ಅವನ ತೊಡೆಗಳ ಮೇಲೆ ಕುಳಿತ ಇಬ್ಬರು ಸತಿಯ-

ಸಕಲ ಧರ್ಮಗಳ ಸಾಗರವಾಗುತ್ತಿದೆ. ಧರ್ಮಗಳ ದಾರಿ ಬೇರೆಬೇರೆಯಾದರೂ ಸೇರಬೇಕಾದ ಗುರಿ ಒಂದೇತಾನೆ ? ಮಾನವ ಕಲ್ಯಾಣ ಅವುಗಳೆಲ್ಲದರ ಅಂತ್ಯೋದ್ದೇಶ. ದಿನಾಂಕ 18-5-89 ರಂದು ನಗರದ ವಿಜಯ ನಗರ ಬಡಾವಣೆಯಲ್ಲಿ ಬಸವ ಜಯಂತಿಯ ಆಚರಣೆ. ಜಗಜ್ಯೋತಿ ಬಸವೇಶ್ವರ ಕಲ್ಯಾಣ ಕೇಂದ್ರದ ಉದ್ಘಾಟನಾ ಸಂದರ್ಭ. ಸುಮಾರು ಇಪ್ಪತ್ತೈದು ಲಕ್ಷರೂಪಾಯಿಗಳ ವೆಚ್ಚದಲ್ಲಿ ನಿರ್ಮಿತವಾದ ಭವ್ಯ ಕಲ್ಯಾಣ ಮಂದಿರದ ತುಂಬಾ ಬಸವ ತತ್ವಾಭಿಮಾನಿಗಳು.

ಸಮಾರಂಭವನ್ನು ಉದ್ಘಾಟಿಸುತ್ತ ಪರಮ ಪೂಜ್ಯ ಶ್ರೀ ಸಿದ್ಧಗಂಗಾ ಶ್ರೀ ಶ್ರೀಗಳು ಬಸವಣ್ಣನವರು ಸುಧಾರಕ ಸಾರ್ವಭೌಮರು ಅವರ ಸಂದೇಶ ಆಧುನಿಕ ಜಗತ್ತಿಗೆ ಅತ್ಯಗತ್ಯವಾಗಿ ಬೇಕು. ವೀರಶೈವ ಧರ್ಮ ಮತ್ತು ವೀರಶೈವ ಸಮಾಜ ಸಂಕುಚಿತವಾದುದಲ್ಲ. ವಿಶ್ವಮಾನ್ಯವಾದವು. ಸಮಾಜ ವೀರ್ಯವತ್ತಾಗ ಬೇಕಾದರೆ ಸಂಘಟನೆ ಅತಿಮುಖ್ಯ. ಬಸವಧ್ವಜದಡಿಯಲ್ಲಿ ಒಂದಾಗಬೇಕು ಎಂಬುದಾಗಿ. ನುಡಿದರು.

ಬಸವ ಜಯಂತಿಯನ್ನು ಆಚರಿಸುತ್ತಿರುವ ನಗರದ ಸಮಾಜ ಬಾಂಧವರ ಪರಿಚಯ ನಮಗಿನ್ನು ಆಗಬೇಕಾಗಿದೆ, ಸಮಾಜದ ಅಭಿವೃದ್ಧಿಗಾಗಿ ಶ್ರಮಿಸುತ್ತಿರುವ ಪದಾಧಿಕಾರಿಗಳು ಶ್ಲಾಘನೀಯರು ಎಂದು ಪೂಜ್ಯ ಶ್ರೀ ಶ್ರೀ ಮಲ್ಲಿಕಾರ್ಜುನ-ಮುರಘರಾಜೇಂದ್ರ ಸ್ವಾಮಿಗಳು ಮಾತನಾಡಿದರು.

ಸನ್ಮಾನಿತರ ಪರವಾಗಿ ಮಾತನಾಡಿದ ಮಾಜಿ ಮುಖ್ಯಮಂತ್ರಿಗಳಾದ ಶ್ರೀ ಎಸ್. ಆರ್. ಬೊಮ್ಮಾಯಿಯವರು ಧರ್ಮ ಮತ್ತು ರಾಜಕಿಯ ಒಂದೇ ನಾಣ್ಯದ ಎರಡು ಮುಖಗಳು. ಬಸವಣ್ಣ ಸ್ಥಾಪಿಸಿದ ಸಮಾಜ ಪರಿಪೂರ್ಣವಾದುದು. ಆದರಿದು ಒಳ ಪಂಗಡಗಳಿಂದಾಗಿ ಅಸಂಘಟಿತವಾಗಿದೆ. ಬಸವ ಜಯಂತಿಯ ದಿನವಾದರೂ ಇಡೀ ಸಮಾಜದವರೆಲ್ಲರೂ ಒಂದೆಡೆ ಸೇರುವಂಥ ಕಾರ್ಯವಾಗಬೇಕು ಎಂದು ಹೇಳಿದರು.

ಒಂದು ಕೋಟಿ ವೀರಶೈವರಿರುವ ರಾಜ್ಯದಲ್ಲಿ ಸಾಮಾಜಿಕ ಅಭಿವೃದ್ಧಿಯಾಗಿಲ್ಲವೆಂಬುದು ದುರ್ದೈವದ ಮಾತು. ಮಠಾಧೀಶರು ಭಿನ್ನಾಭಿಪ್ರಾಯಗಳನ್ನು ಮರೆತು ಸಮಾಜಕ್ಕೆ ಮಾರ್ಗದರ್ಶನ ಮಾಡಬೇಕು ಎಂದು ಶ್ರೀಮತಿ ಕೆ. ಎಸ್. ನಾಗರತ್ನಮ್ಮನವರು ನುಡಿದರು.

ಅಧ್ಯಕ್ಷತೆ ವಹಿಸಿದ್ದ ಸುತ್ತೂರು ಪೂಜ್ಯ ಶ್ರೀಶ್ರೀಗಳು ಮಾತನಾಡುತ್ತ ಬಸವಾದಿ ಶರಣರ ಸಾಹಿತ್ಯದ ಅಧ್ಯಯನ ಮಾಡುವತ್ತ ಯುವಜನಾಂಗ ಗಮನ ಕೊಡಬೇಕೆಂದರು.



ಶ್ರೀ ಬಿ ಎಸ್. ಪರಮಶಿವಯ್ಯನವರು ಕಲ್ಯಾಣ ಕೇಂದ್ರದವರದಿ ಒಪ್ಪಿಸಿದರು. ಶ್ರೀ ಗೊ. ರು. ಚೆನ್ನಬಸಪ್ಪನವರು ಸನ್ಮಾನಿತರಾದ ಕರ್ನಾಟಕ ವಿದ್ಯಾಭಿವೃದ್ಧಿ ನಿಧಿಯ ಮಾಜಿ ಅಧ್ಯಕ್ಷರುಗಳ, ಶ್ರೀ ಎಸ್. ಆರ್. ಬೊಮ್ಮಾಯಿ, ಶ್ರೀಮತಿ ಕೆ. ಎಸ್. ನಾಗರತ್ನಮ್ಮನವರ ಪರಿಚಯ ಮಾಡಿಕೊಟ್ಟರು. ಶ್ರೀಮತಿ ಲೀಲಾದೇವಿ ಆರ್. ಪ್ರಸಾದ್‌ರವರು ಸ್ವಾಗತಿಸಿದರು. ಶ್ರೀ ಶಿವಪ್ಪನವರು ಕಾರ್ಯಕ್ರಮ ನಿರೂಪಿಸಿದರು. ರಾತ್ರಿ 10 ಘಂಟೆಗೆ ಜಗಜ್ಯೋತಿ ಬಸವೇಶ್ವರ ನಾಟಕ ಪ್ರಾರಂಭವಾಗಿ ಬೆಳಗ್ಗೆ 5-30 ಗೆ ಪ್ರದರ್ಶಿತವಾಯಿತು. ಸಮಾಜ ಬಂಧುಗಳ ಶ್ರದ್ಧಾ ಪೂರ್ಣ ಪ್ರೋ-ತ್ಸಾಹದಿಂದಾಗಿ ನಾಟಕ ಉತ್ತಮಮಟ್ಟದ ಪ್ರದರ್ಶನವನ್ನು ನೀಡಿತು. ಕಲ್ಯಾಣ ಕೇಂದ್ರದ ವಿದ್ಯಾರ್ಥಿ ನಿಲಯದಲಿ ಅಧ್ಯಯನ ಮಾಡುತ್ತಿರುವ ಗುಲ್ಬರ್ಗದ ವಿದ್ಯಾರ್ಥಿ ಬಂಧುಗಳು ಪ್ರೇಕ್ಷಕರಿಗೆ ತಮ್ಮ ಮಂಚವನ್ನೇ ಹೊರಗೆ ತಂದಿಟ್ಟು ಕಂಬಳಿಹಾಸಿ ತಮ್ಮ ಅಳಿಲು ಸೇವೆಯನ್ನರ್ಪಿಸಿದ್ದಲ್ಲದೆ ಕೊನೆತನಕ ನಾಟಕ ನೋಡಿ ಸಂತೋಷವನ್ನು ವ್ಯಕ್ತಪಡಿಸಿದರು.

ದಿನಾಂಕ 19-5-89ರಂದು 224ನೆ ಪ್ರಯೋಗವಾಗಿ ಬಸವ ಜಯಂತಿ ನೆಲಮಂಲ ತಾಲ್ಲೂಕು ಕದರನಹಳ್ಳಿಯಲ್ಲಿ ನಡೆಯಿತು. ಸಮಾರಂಭದ ವ್ಯವಸ್ಥೆ ನೆಲಮಂಗಲದ ಪವಾಡದ ಬಸವಣ್ಣ ದೇವರ ಮಠದ ಪೂಜ್ಯ ಶ್ರೀ ಶ್ರೀ ಗಳಾದ ಸದಾಶಿವಸ್ವಾಮಿಗಳ ದಿವ್ಯ ಮಾರ್ಗದರ್ಶನದಲ್ಲಿ ಹೃದಯ ಸ್ಪರ್ಶಿಯಾಗಿ ವ್ಯವಸ್ಥಿತವಾಗಿತ್ತು. ಊರು ತೋರಣಗಳಿಂದ, ಸಾಲುಕಮಾನುಗಳಿಂದ, ಚಿತ್ರವತ್ತಾದ ರಂಗೋಲಿಗಳಿಂದ ಶೋಭಿಸಿತು. ಪರಮ ಪೂಜ್ಯರನ್ನು ಭಕ್ತಿ ಶ್ರದ್ಧೆಗಳಿಂದ ಉತ್ಸವ ಪೂರ್ವಕವಾಗಿ ಸ್ವಾಗತಿಸಿದರು ಬಸವಬಂಧುಗಳು.

ಸಮಾರಂಭದಲ್ಲಿ ಮಾತನಾಡುತ್ತ ಶ್ರೀ ಮಠದ ವಿಶೇಷಾಧಿಕಾರಿಗಳಾದ ಶ್ರೀ ಕೆ. ಎಂ. ರೇವಣ್ಣ ಸಿದ್ದಯ್ಯನವರು ಸಿದ್ಧಗಂಗಾ ಮಠದ ಸೇವಾ ವ್ಯಾಪ್ತಿಯನ್ನು ವಿವರಿಸಿದರಲ್ಲದೆ, ಪೂಜ್ಯ ಶ್ರೀ ಶ್ರೀ ಗಳವರ ಅನುಪಮ ವ್ಯಕ್ತಿತ್ವವನ್ನು ಭಕ್ತಿ ತುಂಬಿ ಪರಿಚಯಿಸಿದರು. ಬಸವಣ್ಣನವರ ಧರ್ಮ ಪರಂಪರೆಯಲ್ಲಿ ಅರಳಿದ ಪುಣ್ಯ ಸ್ವರೂಪರು ಶ್ರೀ ಶ್ರೀ ಗಳು ಎಂದು ನುಡಿದರು.

ಮನುಕುಲದ ಮಾಂಗಲ್ಯವಾದ ಬಸವಣ್ಣನವರು ಆಚರಿಸಿ ತೋರಿಸಿದ ಕಾಯಕತತ್ವಕ್ಕೆ ದಾಸೋಹ ಮಣಿಹಕ್ಕೆ ಜೀವಂತ ಶಬ್ದಕೋಶವಾಗಿದ್ದಾರೆ ಪರಮಪೂಜ್ಯ ಶ್ರೀ ಶ್ರೀ ಗಳು ಎಂಬುದಾಗಿ ಶ್ರೀ ಬಿ ವೀರಭದ್ರಯ್ಯನವರು ಉಪನ್ಯಾಸ ಮಾಡಿದರು.

1918 ರಷ್ಟು ಹಿಂದೆಯೇ ರಾಷ್ಟ್ರದ ಪ್ರಮುಖ ದಿನಪತ್ರಿಕೆಯಾದ **Times of India** ದಲ್ಲಿ ಬಸವಣ್ಣನವರ ಬಗ್ಗೆ ಬಂದಿದ್ದ ಲೇಖನದ ಮಾತುಗಳನ್ನು ಉದಾಹರಿಸುತ್ತ, ಬಸವಣ್ಣ ವಿಶ್ವಮಾನ್ಯರು, ಅವರ ಸಂದೇಶ ಸಾರ್ವಕಾಲಿಕವಾದುದು' ಮಹಾಮಾನವತಾವಾದಿಯಾದ ಅವರು ಧರ್ಮದ ನೈಜಸ್ವರೂಪವನ್ನು ಜಗತ್ತಿಗೆ ತೋರಿಸಿದರು! ಎಂಬುದಾಗಿ ಪರಮಪೂಜ್ಯ ಶ್ರೀ ಶ್ರೀಗಳು ಆಶೀರ್ವಚನ ಮಾಡಿದರು. ರಾತ್ರಿ ಮಳೆ ಬಂದ ಕಾರಣ ನಾಟಕ ಕೊಂಚ ತಡವಾಗಿ, ಆದರೂ 10-30 ಘಂಟೆಗೆ ಪ್ರಾರಂಭವಾಯಿತು. ನೆಲದ ಮೇಲೆಯೇ ಭಕ್ತಾದಿಗಳು ಕುಳಿತು ಬಸವಸ್ಮರಣೆಯಲ್ಲಿ ಲೀನರಾದರು. "ಎಲ್ಲಿಂದ ಕರೆತಂದರಪ್ಪಾ ಆ ಹೆಣ್ಣು ಮಕ್ಕಳನ್ನು, ಅವಳಿಜವಳಿ ಇದ್ದಂತಿದ್ದಾರೆ" ಎಂಬುದಾಗಿ ಗಂಗಾಂಬಿಕೆ, ನೀಲಾಂಬಿಕೆಯ ಪಾತ್ರಧಾರಿಗಳನ್ನು ಮೆಚ್ಚಿ ಮಾತನಾಡಿದ ಅಂಚೆಪಾಳ್ಯದ ಸಿದ್ಧಗಂಗಯ್ಯನವರ ಮಾತಿಗೆ ಕರಿಮಣ್ಣಿಯ ಬೆಟ್ಟಯ್ಯನವರು ನಾಲ್ಕು ಸಾವಿರಮಕ್ಕಳೊಳಗೆ ಸಿಕ್ಕ ಜಾತಿಮುತ್ತುಗಳಪ್ಪ ಎಂದು ಹೇಳುತ್ತಿದ್ದುದನ್ನು ವರದಿಗಾರ ಕೇಳಿಸಿಕೊಂಡಾಗ, ಆಯ್ಕೆ ಮಾಡಿದವರ ಶ್ರಮ ಸಾರ್ಥಕವಾಯಿತೆನಿಸಿತ್ತು.

(ಮತ್ತೆ ಬರೆಯುತ್ತೇನೆ.)

"SIDDAGANGA" MONTHLY Reg No KRN Q-9

# ಆಸ್ತಿಕ ಬಂಧುಗಳಲ್ಲಿ ಒಂದು ವಿನಮ್ರ ಮನವಿ

1 ಶ್ರೀ ಸಿದ್ಧಗಂಗಾ ಮಠದಲ್ಲಿ ನಿತ್ಯ ನಾಲ್ಕು ಸಹಸ್ರ ವಿದ್ಯಾರ್ಥಿಗಳಿಗೆ ದಾಸೋಹ ವ್ಯವಸ್ಥೆ ನಡೆಯುತ್ತಿದೆ.

2 ನಾಲ್ಕು ಸಹಸ್ರ ವಿದ್ಯಾರ್ಥಿಗಳು ವಿವಿಧ ಸಮಾಜದಿಂದ ಬಂದವರಾಗಿರುತ್ತಾರೆ. ಜಾತ್ಯತೀತ ಮನೋಧರ್ಮವನ್ನು ರೂಢಿಸಿಕೊಂಡು ಬೆಳೆಯುವ ಮುಕ್ತ ವಾತಾವರಣ ಇಲ್ಲಿನ ವೈಶಿಷ್ಟ್ಯ.

3 ನಿತ್ಯ ಬರುವ ಸಹಸ್ರ ಸಹಸ್ರ ಯಾತ್ರಾರ್ಥಿಗಳಿಗೂ ದಾಸೋಹ ನಡೆಯುತ್ತಿದೆ.

4 **"ಸಿದ್ಧಗಂಗೆಯ ಊಟ ಶಿವಗಂಗೆಯ ನೋಟ"** ಎಂಬುದು ಗಾದೆ ಮಾತಾಗಿದೆ.

5 **" ಪ್ರಸಾದ ತೆಗೆದು ಕೊಂಡು ಹೋಗಿ "**–ಎಂಬುದೇ ಪರಮ ಪೂಜ್ಯ **ಶ್ರೀ ಶ್ರೀ ಗಳವರು** ಕ್ಷೇತ್ರಾರ್ಥಿಗಳಿಗೆಲ್ಲ ಹೇಳುವ ನಿತ್ಯ ಪಂಚಾಕ್ಷರಿ ಮಂತ್ರ

6 ಇಂಥ ದಾಸೋಹ ಮಣಿಹದಲ್ಲಿ ನಿಮ್ಮದೂ ಕಾಣಿಕೆ ಸಲ್ಲಿಸಲು ಅವಕಾಶವಿರುತ್ತದೆ.

7 ದಾಸೋಹಕ್ಕೆ ಧನ-ಧಾನ್ಯ ರೂಪದಲ್ಲಿ ಯಥಾಶಕ್ತಿ ಕಾಣಿಕೆ ಅರ್ಪಿಸಿ ಧನ್ಯರಾಗಲು ಇದೊಂದು ಅಪೂರ್ವ ಅವಕಾಶ.

8 ನೀವು ನೀಡುವ ಒಂದು ಸೇರು ಧಾನ್ಯ, ಒಂದು ರೂಪಾಯಿ ಸಾರ್ಥಕ ವಿನಿಯೋಗಕ್ಕೆ ಮೀಸಲಾಗುತ್ತದೆ.

9 ನೀವೂ ದಾಸೋಹದಲ್ಲಿ ಭಾಗಿಗಳಾಗುವ ಪುಣ್ಯ ಸಂಕಲ್ಪ ಇಂದೇ ಮಾಡುತ್ತೀರಾಗಿ **' ಸಿದ್ಧಗಂಗಾ '** ಆಶಿಸುತ್ತದೆ.

ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಮುದ್ರಣಾಲಯ, ಶ್ರೀ ಸಿದ್ಧಗಂಗಾ ಮಠ